ನಮಸ್ಕ್ರಿಯೇ । ಸರ್ವಮಂಗಲ ಸಂಯುಕ್ತ ಮಹಾ
ಕುಂಭಾಭಿಷೇಚನಂ ॥೫॥ ನೀರಾಜನಾಚಮೌ ದೇಹಶೋ
ಧಃ ಕೇಶಪ್ರಸಾಧನಮ್ । ಧೂಪಾಧಿ ವಾಸನಂಚೇತಿ
ಚತ್ವಾರಿಂಶ ದಿಹಸ್ಮೃತಾಃ ॥ ॥ ೬ ॥

(೩) ಅಲಂಕಾರಾಸನೇ.-(೨೫) ವಸ್ತ್ರಾರ್ಘ್ಯಪಾದ್ಯಾ
ಚಮನಗನ್ಧಭೂಷಣಪುಂಡ್ರಕಮ್ । ಉಪವೀತಾಚಮೌ
ಧೂಪ ದೀಪಾ ಚಮೌ ಪುಷ್ಪಾಂಜಲೀಃ ॥ ೭ ॥ ಆದರ್ಶ
ನೃತ್ತಗೀತಾದಿ ಛತ್ರಚಾಮರಕೇತನಮ್ । ಮಂತ್ರಪ್ರ
ಸೂನಂ ಮಾತ್ರಾಂಚ ಮುಖವಾಸಂಚವೀಟಿಕಾಮ್ ॥೮॥
ಅರ್ಘ್ಯಂಚೇತ್ಯುಪಚಾರಾಣಾಂ ಪಂಚವಿಂಶತಿಮರ್ಪಯೇ॥

(೪) ಭೋಜ್ಯಾಸನೇ-(೧೬) ಪಾದ್ಯಾಚಮಾರ್ಘ್ಯಣೀ
ಯಾನಿ ಮಧುಪರ್ಕಂ ತಥಾಚಮಃ ॥ ೯ ॥ ಗಾಂ ಸುವ

---

ಧೂಪ, ದೀಪ, ಅರಶಿಣಪುಡಿಯುಲೇಪನ, ವಸ್ತ್ರ, ಉಪವೀತ, ಅರ್ಘ್ಯ, ಪಾದ್ಯ, ಪವಿತ್ರ, ಆಚಮನ, ನೃತ್ತ, ಗೀತ, ವೇದ, ವಾದ್ಯ, ಸ್ತುತಿ, ನಮಸ್ಕಾರ, ಸರ್ವಮಂಗಲಯುಕ್ತವಾದ ಮಹಾಕುಂಭಾಭಿಷೇಚನ, ಕರ್ಪೂರ ನೀರಾಜನ, ಆಚಮನ, ದೇಹಶೋಧನ, ಕೇಶಪ್ರಸಾಧನ, ಧೂಪಾಧಿವಾಸನ" ಗಳೆಂಬೀ ಉಪಚಾರಗಳೆ. ॥ ೬ ॥

೩ನೇ ಅಲಂಕಾರಾಸನದಲ್ಲಿ (೨೫) ಉಪಚಾರಗಳು. "ವಸ್ತ್ರ, ಅರ್ಘ್ಯ, ಪಾದ್ಯ, ಆಚಮನ, ಗನ್ಧ, ಭೂಷಣ, ಊರ್ಧ್ವಪುಂಡ್ರತಿಲಕ, ಉಪವೀತ, ಆಚಮನ, ಧೂಪ, ದೀಪ, ಆಚಮನ, ಪುಷ್ಪಾಂಜಲಿ, ಆದರ್ಶ (ಕನ್ನಡಿ) ನೃತ್ತ, ಗೀತ, ವಾದ್ಯ, ಛತ್ರ, ಚಾಮರ, ಧ್ವಜಪತಾಕ, ಮಂತ್ರಪುಷ್ಪ, ಮಾತ್ರಾದಾನ, ಮುಖವಾಸ, ತಾಂಬೂಲ, ಅರ್ಘ್ಯ" ಗಳೆಂಬೀ ಇಪ್ಪತ್ತೈದು ವುಪಚಾರಗಳನ್ನರ್ಪಿಸಬೇಕು. ॥ ೮ ॥

೪ನೇ ಭೋಜ್ಯಾಸನದಲ್ಲಿ (೧೬) ಉಪಚಾರಗಳು, ಅವು ಯಾವವೆಂದರೆ:—"ಪಾದ್ಯ, ಆಚಮನ, ಅರ್ಘ್ಯಣೋದಕ, ಮಧುಪರ್ಕ, ಆಚಮನ, ಗೋವು, ಸುವರ್ಣ, ರತ್ನ, ನೈವೇದ್ಯ, ಪಾನಕ, ತರ್ಪಣೋದಕ, ಹಸ್ತಪ್ರಕ್ಷಾಳನ, ಆಚಮನ, ಚಂದನ, ಮುಖವಾಸ, ತಾಂಬೂಲ" ಗಳೆಂಬೀ (೧೬) ಉಪಚಾರಗಳನ್ನರ್ಪಿಸಬೇಕು.

ರ್ಘ್ಣಂಚ ರತ್ನಂಚ ನೈವೇದ್ಯಂ ಸಾರ್ಘ್ಯಂ ತತಃ । ಅನು
ಪಾನಂ ತರ್ಪಣಂಚ ಹೋಳನಾಚಮನನ್ದನಮ್ ॥ ಮುಖ
ವಾಸಶ್ಚ ತಾಂಬೂಲ ಮುಪಚಾರಾಸ್ತುಷೋಡಶ ॥ ೧೦॥
(೫) ಪುನರ್ಮಂತ್ರಾಸನೇ.- (೭) ನಾನಾಪೂಪಫಲೇ
ಸ್ತೋತ್ರಂ ಪ್ರದಕ್ಷಿಣನಮಸ್ಕ್ರಿಯೆ ॥ ನೃತ್ತಂಗೀತಂ
ವಾದ್ಯಮಿತಿ ಸಪ್ತಭಿರ್ವಿಭು ಮರ್ಚಯೇತ್ ॥ ॥ ೧೧ ॥
(೬) ಪರ್ಯಂಕಾಸನೇ- (೧೦) ವಸ್ತ್ರಭೂಷಾ ಗನ್ಧಪು
ಷ್ಪಧೂಪನೀರಾಜನಾನಿಚ ॥೧೨॥ ಮುಖವಾಸಂಚತಾಂ
ಬೂಲಂ ಪ್ರಣಾಮಂ ಸ್ತವನಂ ದಶ॥ಉಪಚಾರಾ ಸಮ
ರ್ಪ್ಯೈವಂ ಕ್ಷಾಮಣಂ ಪ್ರಾರ್ಥಯೇದ್ಧರಿಮ್ ॥ ॥ ೧೩ ॥
ಇತ್ಥಂ ತ್ವನೇಕೋಪಚಾರೈ ರಷ್ಟೋತ್ತರಶತೇನವಾ ।
ಚತುಷ್ಷಷ್ಟ್ಯ ಕ್ರಮಾದ್ವಾಪಿ ದ್ವಾತ್ರಿಂಶತ್ಕ್ರಮತೋಪಿ
ವಾ ॥ ೧೪ ॥ ಪರಾರ್ಥಯಜನಂಕುರ್ಯಾ ದೇತನ್ನ್ಯೂನಂ

---

೫ನೇ ಪುನರ್ಮಂತ್ರಾಸನದಲ್ಲಿ (೭) "ನಾನಾ ವಿಧಗಳಾದ ರೊಟ್ಟಿ (ಈ ಶಬ್ದವು "ಪೂರಿಚಿರೋಟಿ" ಮೊದಲಾದ ಭಕ್ಷ್ಯಗಳಿಗೆ ಉಪಲಕ್ಷಣ ವಾಗಿರುವುದು) ಫಲಗಳು, ಸ್ತೋತ್ರ, ಪ್ರದಕ್ಷಿಣ, ನಮಸ್ಕಾರ, ನೃತ್ತ ಗೀತ, ವಾದ್ಯಗಳೆಂಬೀ (೭) ಉಪಚಾರಗಳನ್ನು ಸಮರ್ಪಿಸಬೇಕು. ॥೧೧॥

೬ನೇ ಪರ್ಯಂಕಾಸನದಲ್ಲಿ (೧೦) ಉಪಚಾರಗಳು. ವಸ್ತ್ರ, ಭೂಷಣ, ಗಂಧ, ಪುಷ್ಪ, ಧೂಪ, ನೀರಾಜನ, ಮುಖವಾಸ, ತಾಂಬೂಲ, ಪ್ರಣಾಮ, ಸ್ತುತಿ" ಗಳೆಂಬೀ (೧೦) ಉಪಚಾರಗಳನ್ನು ಆಚರಿಸಬೇಕು. ಇವು ಎಲ್ಲವೂ ಸೇರಿ (೧೦೪) ಉಪಚಾರಗಳಾಗುವುವು. ಇಂತಹ ಉಪಚಾರಗ ಳನ್ನು ಸಮರ್ಪಿಸಿ ಈ ಸಂದರ್ಭಗಳಲ್ಲುಂಟಾಗುವ ಅಪರಾಧಗಳನ್ನು ಕ್ಷಮಿಸ ಬೇಕೆಂದು ಶ್ರಿಯಃಪತಿಯಾದ ಪರಮಾತ್ಮನನ್ನು ಪ್ರಾರ್ಥಿಸಬೇಕು. ॥೧೩॥

ಈರೀತಿಯಾಗಿ ಅನೇಕೋಪಚಾರಗಳಿಂದಾದರೂ, ನೂರೆಂಟು ಉಪ ಚಾರಗಳಿಂದಾದರೂ, ಅರವತ್ತುನಾಲ್ಕು ಉಪಚಾರಗಳಿಂದಾದರೂ, ಮುವ್ವ ತ್ತೆರಡು ಉಪಚಾರಗಳಿಂದಾದರೂ, ದೇವಾಲಯಗಳಲ್ಲಿ ಭಗವದಾರಾಧನ ವನ್ನು ಮಾಡಬೇಕು. ಇಲ್ಲಿ ಉಕ್ತವಾಗಿರುವ (೩೦) ಉಪಚಾರಗಳಿಗೆ

ನಕಾರಯೇತ್ । ಆತ್ಮಾರ್ಥೇ ಷೋಡಶೈರ್ವಾಪಿ ದ್ವಾತ್ರಿಂ
ಶತ್ಕ್ರಮತೋಽಪಿ ವಾ ॥೧೫॥ ಆಸನಂ ಪಾದ್ಯಮಾಚಾಮ
ಸ್ನಾನಂ ವಸ್ತ್ರಂ ಸುಗನ್ಧಕಃ । ಧೂಪದೀಪಾರ್ಘ್ಯನಿ
ಹವಿಃ ಪಾನೀಯಂಚ ಪ್ರಣಾಮಕಃ ॥ ಇತಿ ದ್ವಾದಶಭಿ
ರ್ವಾಪಿ ಕ್ರಮೇಣಾಭ್ಯರ್ಚಯೇದ್ವಿಭುಮ್ ॥೧೬॥ ಆಸನಂ
ಪಾದ್ಯ ಮಾಚಾಮೋ ಧೂಪದೀಪಾರ್ಘ್ಯಮೇವ ಚ। ಹವಿಃ
ಪಾನೀಯ ಮಿತ್ಯಷ್ಟಾವುಪಚಾರಾ ಹರೇಃ ಪ್ರಿಯಾಃ ॥೧೭॥
ಅಥವಾವಾಹನಂಚಾದಾ ವನ್ತೇಚೋದ್ವಾಸನಂ ತಥಾ ।
ಸರ್ವೇಷಾ ಮುಪಚಾರಾಣಾಂ ಸಾಮಾನ್ಯ ಮಭಿಧೀಯ
ತೇ ।೧೮॥ ಪುಷ್ಪದಾಮ ಪ್ರಣಾಮೌ ದ್ವೌ ಪ್ರಣಾಮ
ಸ್ತ್ವೇಕ ಏವ ವಾ । ಸರ್ವೇಷಾಮುಪಚಾರಾಣಾ ಮುತ್ತ
ಮಸ್ಸುಕೃತೋಮತಃ ॥ ॥೧೯॥

---

ನ್ಯೂನವಾಗಿ ದೇವಾಲಯಗಳಲ್ಲಿ ಅರ್ಚಿಸಬಾರದು. ದೇವಾಲಯಗಳಲ್ಲಿ ಮಾಡಲ್ಪಡುವ ಪೂಜೆಯನ್ನು ಪರಾರ್ಥಯಜನವೆಂತಲೂ ಗೃಹದಲ್ಲಿ ಮಾಡುವ ಪೂಜೆಯನ್ನು ಆತ್ಮಾರ್ಥಯಜನವೆಂತಲೂ ಹೇಳುವರು. ಆತ್ಮಾರ್ಥಯಜನದಲ್ಲಿ (೧೬) ಷೋಡಶೋಪಚಾರಗಳನ್ನಾದರೂ ಶಕ್ತ್ಯಾನು ದ್ದಲ್ಲಿ (೩೨) ಉಪಚಾರಗಳನ್ನಾದರೂ ಮಾಡಬಹುದು. ‖ ೧೫ ‖

ಅಥವಾ "ಆಸನ, ಪಾದ್ಯ, ಆಚಮನ, ಸ್ನಾನ, ವಸ್ತ್ರ, ಶ್ರೀಗಂಧ, ಧೂಪ, ದೀಪ, ಅರ್ಘ್ಯ, ಹವಿರ್ನಿವೇದನ, ಪಾನೀಯ ಸಮರ್ಪಣ, ನಮ ಸ್ಕಾರ" ಗಳೆಂಬೀ (೧೨) ಉಪಚಾರಗಳನ್ನಾದರೂ ಗೃಹಾರಾಧನದಲ್ಲಿ ಮಾಡಬಹುದು. ‖ ೧೬ ‖

ಇದಕ್ಕೂ ಶಕ್ತಿಯಿಲ್ಲದವನ ವಿಷಯದಲ್ಲಿ "ಆಸನ, ಪಾದ್ಯ, ಆಚ ಮನ, ಧೂಪ, ದೀಪ, ಅರ್ಘ್ಯ, ಹವಿರ್ನಿವೇದನ, ಪಾನೀಯ ಸಮರ್ಪಣ" ಗಳೆಂಬೀ (೮) ಅಷ್ಟೋಪಚಾರಗಳೇ ಪರಮಪುರುಷನಿಗೆ ಪ್ರಿಯಗಳಾ ಗಿರುವುವು.

ಮತ್ತು ಮೇಲೆ ವಿವರಿಸಿರುವಂತೆ ತನ್ನ ಶಕ್ತಿಯನ್ನನುಸರಿಸಿ ಎಷ್ಟ ವುಪಚಾರಗಳನ್ನು ಮಾಡಿದರೂ ಅವುಗಳಿಗೆ ಮೊದಲು ಆವಾಹನವನ್ನೂ ಕಡೆಯಲ್ಲಿ ಉದ್ವಾಸನವನ್ನೂ ಸೇರಿಸಿಕೊಳ್ಳಬೇಕು. ಕಿಂಚ ಸಮಸ್ತೋ

ದ್ವಾತ್ರಿಂಶದುಪಚಾರಾಣಾಂಕ್ರಮಃ.

(೧) ಮಂತ್ರಾಸನೇ.- (೫) ಆವಾಹನಾಸನೇ ಚಾ ರ್ಘ್ಯಂಪಾದ್ಯ ಮಾಚಮನಂ ತಥಾ । ಪಂಚೋಪಚಾರಾ ದೇವಸ್ಯ ಮನ್ತ್ರಾಸನಪರಿಗ್ರಹೇ ॥ ॥ ೨೦ ॥

(೨) ಸ್ನಾನಾಸನೇ-(೭) ಪಾದುಕೇ ದಂತಕಾಷ್ಠಂಚ ತೈಲ ಮುದ್ವರ್ತ್ತನಂ ತಥಾ । ಶಿರಸ್ನಾಮಲಕಂತೋಯಂ ಕಂತಕಂ ಪ್ಲೋತಮೇವಚ ॥೨೧॥ ಸಪ್ತೋಪಚಾರಾ ದೇವಸ್ಯ ಸ್ನಾನಾಸನಪರಿಗ್ರಹೇ ॥

(೩) ಅಲಂಕಾರಾಸನೇ - (೯) ವಸ್ತ್ರಂ ಯಜ್ಞೋಪ ವೀತಂಚ ಗನ್ಧಭೂಷಣಪುಷ್ಪಕೇ ॥೨೨॥ ಆದರ್ಶಧೂಪ ದೀಪಾಶ್ಚ ಮಾತ್ರಾದಾನಂ ತಥೈವಚ । ನವೋಪಚಾರಾ ದೇವಸ್ಯ ತ್ವಲಂಕಾರಾಸನಗ್ರಹೇ ॥ ॥ ೨೩ ॥

(೪) ಭೋಜ್ಯಾಸನೇ (೪) ಮಧುಪರ್ಕ್ಕಾರ್ಘ್ಯಣೋಚೈವ

---

ಪಚಾರಗಳಲ್ಲಿಯೂ ಪುಷ್ಪಮಾಲಾ ಸಮರ್ಪಣವೂ ನಮಸ್ಕಾರವೂ ಸೇರಿದರೆ ಇವು ಸರ್ವಶ್ಲಾಘ್ಯಗಳಾದ ಉಪಚಾರಗಳು ಮಾಡಲ್ಪಟ್ಟಂತೆ ಆಗುವುವು. ॥ ೧೯ ॥

(೩೨) ಉಪಚಾರಗಳ ಕ್ರಮವು.

೧ನೇ ಮಂತ್ರಾಸನದಲ್ಲಿ (೫) "ಆವಾಹನ, ಆಸನ, ಅರ್ಘ್ಯ, ಪಾದ್ಯ, ಆಚಮನ" ಗಳೆಂಬೀ ಐದು ಉಪಚಾರಗಳನ್ನು ಮಾಡಬೇಕು. ॥

೨ನೇ ಸ್ನಾನಾಸನದಲ್ಲಿ (೭) "ಪಾದುಕಾ, ದಂತಕಾಷ್ಠ, ತೈಲ, ಉದ್ವರ್ತನ, ಆಮಲಕತೋಯ, ಕಂಕತ, ಪ್ಲೋತ ವಸ್ತ್ರ ಸಮರ್ಪಣ" ಗಳೆಂಬೀ ಏಳು ಉಪಚಾರಗಳನ್ನು ಮಾಡಬೇಕು. ॥ ೨೧ ॥

೩ನೇ ಅಲಂಕಾರಾಸನದಲ್ಲಿ (೯) "ವಸ್ತ್ರ, ಯಜ್ಞೋಪವೀತ, ಗಂಧ, ಭೂಷಣ, ಊರ್ಧ್ವಪುಂಡ್ರತಿಲಕ, ಕನ್ನಡಿ, ಧೂಪ, ದೀಪ, ಮಾತ್ರಾದಾನ" ಗಳೆಂಬೀ ಒಂಭತ್ತು ಉಪಚಾರಗಳಿಂದ ಆರಾಧಿಸಬೇಕು.

೪ನೇ ಭೋಜ್ಯಾಸನದಲ್ಲಿ (೪) "ಮಧುಪರ್ಕನಿವೇದನ, ಅರ್ಹಣೋದಕ ಸಮರ್ಪಣ, ಹವಿರ್ನಿವೇದನ, ಪಾನಕಸಮರ್ಪಣ" ಗಳೆಂಬೀ ನಾಲ್ಕು ಉಪಚಾರಗಳನ್ನು ಮಾಡಬೇಕು. ॥ ೨೪ ॥

ಪ್ರಾಪಣಂ ತರ್ಪಣಂತಥಾ । ಉಪಚಾರಾಸ್ತು ಚತ್ವಾರೋ
ಭೋಜ್ಯಾಸನಪರಿಗ್ರಹೇ ॥ ॥೨೪॥

(೫) ಪುನರ್ಮಂತ್ರಾಸನೇ (೪) ಗನ್ಧಃ ಕರ್ಪೂರ ತಾಮ್ಬೂಲಂ ನೃತ್ತ ಗೀತೇ ನಮಸ್ಕ್ರಿಯಾ । ಪುನರ್ಮಂತ್ರಾಸನೇ ವಿಷ್ಣೋ ರುಪಚಾರಾ ಶ್ಚತುರ್ವಿಧಾಃ ॥ ॥೨೫॥

(೬) ಪರ್ಯಂಕಾಸನೆ (೩) ಸ್ತೋತ್ರಂ ನೀರಾಜನಂ ಚೈವ ಪ್ರದಕ್ಷಿಣ ನಮಸ್ಕ್ರಿಯಾ । ತ್ರಿವಿಧಾ ಉಪಚಾರಾಸ್ಸ್ಯುಃ ಪರ್ಯಂಕಾಸನ ಸಂಗ್ರಹೆ ॥ ॥೨೬॥

## ಷೋಡಶೋಪಚಾರ ಕ್ರಮಃ.

ಆವಾಹನಾಸನೇಚಾರ್ಘ್ಯಂ ಪಾದ್ಯ ಮಾಚಮನಂ ತಥಾ। ಆದ್ಯೇಮಂತ್ರಾಸನೇವಿದ್ಯಾ ತ್ಸ್ನಾನಂ ಸ್ನಾನಾಸನೇಮತಮ್ ॥ ೨೭ ॥ ವಸ್ತ್ರೋಪವೀತೇ ಗಂಧಶ್ಚ ಪುಷ್ಪಧೂಪೌತತೋಮತೌ ॥೨೮॥ ದೀಪಂಚೇತ್ಯುಪಚಾರಾಸ್ಸ್ಯುರಲಂಕಾರಾಸನೇವಿಭೋಃ। ಭೋಜ್ಯಾಸನೇತುನೈವೇದ್ಯಂ

---

೫ನೇ ಪುನರ್ಮಂತ್ರಾಸನದಲ್ಲಿ (೪) "ಗಂಧ, ಕರ್ಪೂರಾರ್ತಿ, ತಾಂಬೂಲಸಮರ್ಪಣ, ನೃತ್ತಗೀತ ನಮಸ್ಕಾರ" ರೂಪಗಳಾದ ನಾಲ್ಕು ಉಪಚಾರಗಳನ್ನಾಚರಿಸಬೇಕು. ‖ ೨೫ ‖

೬ನೇ ಪರ್ಯಂಕಾಸನದಲ್ಲಿ (೩) ಸ್ತೋತ್ರ, ಕರ್ಪೂರ ನೀರಾಜನ, ಪ್ರದಕ್ಷಿಣ ನಮಸ್ಕಾರ" ಗಳೆಂಬೀ ಮೂರುವಿಧಗಳಾದ ಉಪಚಾರಗಳನ್ನು ಮಾಡಿದರೆ ಒಟ್ಟುಸೇರಿ (೩೦) ಉಪಚಾರಗಳಾಗುವುವು. ‖ ೨೬ ‖

## ಷೋಡಶೋಪಚಾರ ಕ್ರಮವು.

"ಆವಾಹನ, ಆಸನ, ಅರ್ಘ್ಯ, ಪಾದ್ಯ, ಆಚಮನ" ಗಳನ್ನು ಮೊದಲನೆ ಮಂತ್ರಾಸನದಲ್ಲಿಯೂ, ಸ್ನಾನಾಸನದಲ್ಲಿ ಅಭಿಷೇಕವನ್ನೂ, ಅಲಂಕಾರಾಸನದಲ್ಲಿ "ವಸ್ತ್ರ, ಉಪವೀತ, ಗಂಧ, ಪುಷ್ಪ, ಧೂಪ, ದೀಪ," ಗಳೆಂಬೀ ಆರು ಉಪಚಾರಗಳನ್ನೂ, ಭೋಜ್ಯಾಸನದಲ್ಲಿ "ನೈವೇದ್ಯ, ತಾಂಬೂಲ, ನಮಸ್ಕಾರ" ಗಳೆಂಬೀ ಮೂರು ಉಪಚಾರಗಳನ್ನೂ, ಶಯನಾಸನದಲ್ಲಿ ಶಯನವನ್ನೂ ಮಾಡಿದರೆ ಷಡಾಸನ ವಿಧಾನದಲ್ಲಿ ಷೋಡಶೋಪಚಾರ ವಿಭಾಗವು ವ್ಯಕ್ತನಾಗುವುದು. (ಇಲ್ಲಿ ಪುನರ್ಮಂತ್ರಾಸನೋಪಚಾರಗಳನ್ನು

ತಾಂಬೂಲಂಚ ನಮಸ್ಕ್ರಿಯಾ ॥೨೯॥ ಪುನರ್ಮಂತ್ರಾಸ್ತ ನೇಸ್ತ್ಯಾತ್ರಾಂ ಶಯನಂ ಶಯನಾಸನೇ । ಉಪಚಾರವಿಭಾಗೋಯಂ ಷಡಾಸನವಿಧಃನತಃ ॥ ವಿಜ್ಞೇಯೋ ಹ್ಯುಪಚಾರಾಣಾಂ ಷೋಡಶಾನಾಮಪಿ ಕ್ರಮಾತ್ ॥ ॥೩೦॥

## ಅಥ ಶ್ರೀ ಪಾಂಚರಾತ್ರರಕ್ಷೋದಾಹೃತ ಭಗವದಪಚಾರಾಃ.

### ಶ್ರೀವರಾಹೇ॥ ಶ್ರೀಧರಣೀ ಉವಾಚ.

ದೇವದೇ ಜಗನ್ನಾಥ ಶ್ರುತಂ ತ್ವತ್ತೋ ಮಯಾಖಿಲಮ್ । ಯಾನ್ ಕೃತ್ವಾ ಯೋಗ್ಯತಾಂ ಯಾನ್ತಿ ತವ ವೇಶ್ಮಪ್ರವೇಶನೇ ॥ ತಾನ್ ಬ್ರೂಹಿ ದೇವದೇವೇಶ ಭಕ್ತವತ್ಸಲ ಮಾಧವ ॥ ॥೧॥

---

ಮಾನಸವಾಗಿ ಭಾವಿಸಿದರೆ ಷೋಡಶೋಪಚಾರಗಳಿಗೆ ಅಧಿಕ ಸಂಖ್ಯೆ ಬರಲಾರದು.) ಈರೀತಿಯಾಗಿ ವುಪಚಾರಕ್ರಮಗಳನ್ನರಿಯಬೇಕು. ॥ ೩೦ ॥

ಇನ್ನು ಮುಂದೆ ಶ್ರೀಪಾಂಚರಾತ್ರ ರಕ್ಷಾಗ್ರಂಥದಲ್ಲಿ ಹೇಳಿರುವ ಭಗವದಪರಾಧಗಳು ವಿವರಿಸಲ್ಪಡುವುವು. ಶ್ರೀವರಾಹಪುರಾಣದಲ್ಲಿ ಶ್ರೀವರಾಹರೂಪಿಯಾದ ಪರಮಾತ್ಮನನ್ನು ಕುರಿತು ಭೂದೇವಿಯು ಎಲೈ ಜಗನ್ನಾಯಕನಾದ ದೇವದೇವನೇ ? ನಿನ್ನಿಂದ ಸಮಸ್ತ ಧರ್ಮಗಳು ಶ್ರುತವಾದವು. ಭಗವತ್ಸನ್ನಿಧಿಯಲ್ಲಿ ಯಾವ ಸೇವಾರೂಪಗಳಾದ ಧರ್ಮಗಳನ್ನು ಆಚರಿಸುವಂತವನು ನಿನ್ನ ದಿವ್ಯಾಲಯವನ್ನು ಪ್ರವೇಶಿಸುವುದಕ್ಕೆ ಅರ್ಹನಾಗುವನೋ ಅಂತಹ ಭಗವದ್ಧರ್ಮಗಳನ್ನು ಭಕ್ತವತ್ಸಲನಾದ ನೀನು ನನಗುಪದೇಶಮಾಡಬೇಕೆಂದು ಹೇಳುವ, ಭೂದೇವಿಯ ಮಾತನ್ನು ಕೇಳಿ ವರಾಹರೂಪಿಯಾದ ಪರಮಾತ್ಮನು ಪ್ರತ್ಯುತ್ತರವನ್ನು ಅನುಗ್ರಹಿಸುತ್ತಾನೆ.* ॥ ೧ ॥

---

*ಇಲ್ಲಿ ಭೂದೇವಿಯ ಭಗವದ್ಧರ್ಮಗಳ ವಿಷಯವಾದ ಪ್ರಶ್ನೆಕ್ಕೆ ಪ್ರತ್ಯುತ್ತರವು ಭಗವದಪರಾಧ ವಿಷಯವಾಗಿರುವುದು. "ಆಮ್ರಾನ್ ಪೃಷ್ಟಃ ಕೋವಿದಾರಾನಾಚಷ್ಟ" ಎಂಬೀರೀತಿಯಾದ ವುತ್ತರವನ್ನು ಹೇಳಬಹುದೋ ಎಂದರೆ ? ಭಗವದಾಲಯದಲ್ಲಿ ಧರ್ಮಾಚರಣೆಯನ್ನು ಮಾಡುವುದಕ್ಕಿಂತಲೂ ಭಗವದಪರಾಧಗಳನ್ನು ಮೊದಲು ತ್ಯಾಗಮಾಡುವುದು ಸರ್ವೋತ್ತಮವಾದ ಧರ್ಮವೆಂಬ ಅಂಶವನ್ನು ಹೃದಯದಲ್ಲಿ ನೆನೆಸಿ ಈರೀತಿಯಾದ ಪ್ರತ್ಯುತ್ತರವನ್ನು ಕೊಟ್ಟಿರುವಂತೆ ವಿವೇಕಿಗಳರಿಯಬೇಕು.

ಶ್ರೀ ಭಗವಾನುವಾಚ.

ಅಪಚಾರಾ ನಹಂ ವಕ್ಷ್ಯೇ ತ ಚ್ಛೃಣುಷ್ವ ವಸುಂಧ
ರೇ । ಗೀತವಾದಿತ್ರ ನೃತ್ತಾದಿ ಪುಣ್ಯಾಖ್ಯಾನಕಥಾಕ್ಷ
ಯೇ ॥ ಲೋಪಯಂತ್ಯಥ ಪಾರುಷ್ಯೈ ರ್ಮಮ ವೇಶ್ಮ
ಸು ಮಾನವಾಃ । ತೇ ಯಾಂತಿ ವಸುಧೇ ಪಾಪಾ ನರಕಾ
ನೇಕವಿಂಶತಿಮ್ ॥ ತತ ಸ್ತೇಪಿ ಮಹಾಭಾಗೇ ಗಾರ್ದ
ಭೀಂಯೋನಿ ಮಾಶ್ರಿತಾಃ । ವರ್ತಂತೇ ತತ್ರ ವೈ ದೇವಿ
ಸಪ್ತಜನ್ಮಾನಿ ಸೌಕರೀಂ ॥ ೪ ॥ ವಸ್ತ್ರೇಣಾಚ್ಛಾದ್ಯದೇ
ಹಂತು ಯೋ ನರಃ ಪ್ರಣಮೇತ್ತು ಮಾಮ್ । ಶ್ವಿತ್ರೀ
ಚ ಜಾಯತೆ ಮೂರ್ಖ ಸ್ತ್ರೀಣಿ ಜನ್ಮಾನಿ ಭಾಮಿನಿ ॥೫॥

---

ಎಲೈ ಭೂದೇವಿಯೇ ಭಗವದಪರಾಧಗಳ್ಯಾವವೋ ಅವುಗಳನ್ನು ಮೊದಲು ವಿವರಿಸುತ್ತೇನೆ ಕೇಳು. ಯಾರಾದರೆ ಭಯರಹಿತನಾಗಿ ಘಟ್ಟಿಯಾಗಿ ಕೂಗುತ ನನ್ನ ದಿವ್ಯಾಲಯದಲ್ಲಿ ನಡಿಯುವ ನೃತ್ತ ಗೀತ ವಾದ್ಯಾದಿಗಳನ್ನೂ, ಪಾವನಗಳಾದ ಭಗವತ್ಕಥೆಗಳನ್ನೂ ಕಿವಿಗಳಿಗೆ ಗೋಚರವಾಗದಂತೆ ಲೋಪಿಸುವರೋ ಅಂತವರು ಇಪ್ಪತ್ತೊಂದು ಮಹಾನರಕಗಳನ್ನೂ ಕ್ರಮಕ್ರಮವಾಗಿ ಅನುಭವಿಸಿದಮೇಲೆ ಕತ್ತೆಯ ಜನ್ಮದಲ್ಲಿ ಹುಟ್ಟಿದಬಳಿಕ ಏಳು ಜನ್ಮಗಳು ನೀಚವಾದ ಹಂದಿಯಜನ್ಮದಲ್ಲಿ ಹುಟ್ಟುವರು. (ಇದರಿಂದ ಭಗವತ್ಸೇವಾರ್ಥವಾಗಿ ದೇವಸ್ಥಾನಕ್ಕೆ ಬರತಕ್ಕವರು ಭಗವತ್ಸನ್ನಿಧಿಯಲ್ಲಿ ನಡಿಯುವ ಸೇವೆ ಶಾತ್ತುಮೊರೆ ಸ್ತೋತ್ರಪಾಠಗಳ ಅನುಸಂಧಾನಾದಿಗಳು ನಡಿಯುವಾಗ ಅವುಗಳು ಅನ್ಯರಿಗೆ ಕೇಳಸದಂತೆ ವೃಥಾಮಾತುಗಳನ್ನಾಡಬಾರದೆಂಬ ಅಂಶವು ಹೊರಪಟ್ಟು ಇವು ಬಹು ಅನರ್ಥಕಾರಿಗಳೆಂದೂ ಸೂಚಿತವಾಗುವುವು. ॥ ೪ ॥

ಹೊದ್ದುಕೊಂಡಿರುವ ವಸ್ತ್ರದಿಂದ ತನ್ನ ದೇಹವನ್ನೆಲ್ಲಾ ಮುಚ್ಚಿಕೊಂಡು ಯಾವನಾದರೆ ನನಗೆ ನಮಸ್ಕರಿಸುವನೋ ಅಂತಹ ಮೂರ್ಖನು ಮೂರು ಜನ್ಮಗಳು ಶ್ವೇತಕುಷ್ಠರೋಗಿಯಾಗಿ ಹುಟ್ಟುವನು. ಇದರಿಂದ ನಮಸ್ಕರಿಸುವಾಗ ಹೊದ್ದುಕೊಂಡಿರುವ ವುತ್ತರೀಯವನ್ನು ನಡುವಿನಲ್ಲಿ ಕಟ್ಟಿಕೊಳ್ಳಬೇಕೆಂದು ಹೇಳದಂತೆ ತಿಳಿಯಬೇಕು. "ಪ್ರದಕ್ಷಿಣೆ ಪ್ರಣಾಮೇಚದೇವತಾಗುರುಸನ್ನಿಧೌ । ವಸ್ತ್ರನಿಷ್ಪೀಡನೇಸ್ನಾನವುಪ

ಕೃಷ್ಣ ಕಂಬಳ ಸಂವೀತೋ ಯೋನರಃ ಪ್ರಣಮೇತ್ತು ಮಾಮ್ । ಚಣ್ಡಾಲಯೋನಿತಾಂ ಯಾತಿ ಜನ್ಮಾನಿ ನವಪಂಚಚ ॥೬॥ ತೈಲೇನಾಭ್ಯಕ್ತಸರ್ವಾಂಗ ಉಪಾನದ್ಗೂಢಪಾದುಕಃ । ಯೋ ನರಃ ಪ್ರವಿಶೇದ್ಗೇಹಂ ಮಮ ಭೂತಧರೇ ಶುಭೇ ॥ ಸ ಯಾತಿ ಗೃಹಪಾಲಾನಾಂ ಯೋನೌ ಜನ್ಮತ್ರಯಂ ಶುಭೇ ॥ ೭ ॥ ನಖರೋಮಾಣಿ ಯಶ್ಚೈವ ಕೇಶಾಸ್ಥೀನಿ ತಥೈವಚ। ಯಃ ಕ್ಷಿಪೇನ್ಮಮ ಗೇಹೇಷು ತಸ್ಯ ಪಾಪ ಫಲಂ ಶೃಣು ॥ ೮ ॥ ಮಾಷಕೀಂ

---

ಸ್ಥಾನೇಭಿವಾದನೇ ॥ ಧಾರ್ಯಂಕಟ್ಯಾಮುತ್ತರೀಯಂ ಪಿತೃಕಾರ್ಯೇಸುರಾಲಯೇ" ಎಂಬದಾಗಿ ಸ್ಮೃತಿಸಂಗ್ರಹದಲ್ಲಿ ಹೇಳಿರುವದನ್ನು ಇಲ್ಲಿ ತಿಳಿಯಬೇಕು. ಉತ್ತರೀಯವನ್ನು ವುಪವೀತಾಕಾರವಾಗಿಯೂ ಧರಿಸುವ ಕೆಲವು ಸಂಪ್ರದಾಯವುಂಟು.

ಕಪ್ಪುಬಣ್ಣವುಳ್ಳ ಕಂಬಳಿಯನ್ನು ಹೊದ್ದುಕೊಂಡು ಯಾವನಾದರೆ ನನಿಗೆ ನಮಸ್ಕರಿಸುವನೊ ಅಂತವನು ೧೪ ಜನ್ಮಗಳು ಚಂಡಾಲಯೋನಿಯಲ್ಲಿ ಹುಟ್ಟುವನು. ಇಲ್ಲಿ ಕಂಬಳಿ ಎಂಬ ಮಾತು ಶಾಲ್‌ಹೊದ್ದುಕೊಂಡು ನಮಸ್ಕಾರ ಮಾಡುವದಕ್ಕೂ ನಿಷೇಧಪರವಾಗಿರುವದಲ್ಲದೇ ಕಪ್ಪುಬಣ್ಣ ಶಬ್ದವು ಯಾವ ಬಣ್ಣವುಳ್ಳ ಕಂಬಳಿ ಮೊದಲಾದವುಗಳನ್ನು ಹೊದ್ದುಕೊಂಡು ನಮಸ್ಕರಿಸುವದಕ್ಕೂ ನಿಷೇಧವನ್ನು ತೋರ್ಪಡಿಸುವುದೆಂದರಿಯಬೇಕು.

ಎಲೈ ಭೂತಧಾರಿಣಿಯೆ ? ಯಾವನಾದರೆ ಸರ್ವಾಂಗಗಳಲ್ಲಿಯೂ ಯೆಣ್ಣೆಯನ್ನು ಹಚ್ಚಿಕೊಂಡೂ ಪಾದರಕ್ಷೆಯನ್ನು ಹಾಕಿಕೊಂಡೂ ನನ್ನ ದಿವ್ಯಾಲಯದಲ್ಲಿ ಪ್ರವೇಶಿಸುವನೊ ಅಂತವನು ಮೂರು ಜನ್ಮಗಳು ನಾಯಿಯಾಗಿ ಹುಟ್ಟುವನು. ॥ ೭ ॥

ಮತ್ತು ಉಗುರುಗಳನ್ನಾದರೂ ಕೂದಲುಗಳನ್ನಾದರೂ ಎಲಬುಗಳನ್ನಾದರೂ ನನ್ನ ಆಲಯದಲ್ಲಿ ಯಾವನಾದರೆ ಎಸೆಯುವನೊ ಅವನ ಪಾಪಫಲವನ್ನು ವಿವರಿಸುವೆನು ಕೇಳು. ॥೮॥ ಅವನು ಮೊದಲು ಏಳು ಜನ್ಮಗಳು ನೊಣವಾಗಿ ಹುಟ್ಟಿದಬಳಿಕ ಕ್ರಮಕ್ರಮವಾಗಿ ಏಕವಿಂಶತಿ (೨೧) ಮಹಾನರಕಗಳ ಘೋರಯಾತನೆಗಳನ್ನು ಅನುಭವಿಸುವನು. ॥ ೯ ॥

**ಯೋನಿ ಮಾಶ್ರಿತ್ಯ ನಖರೋಮಚಿತ ಸ್ತದಾ । ಸಪ್ತ ಜನ್ಮಾನಿ ತತ್ರೈವ ನರಕಾ ನೇಕವಿಂಶತಿಮ್ ॥ ॥೯॥ ತಾಮ್ಬೂಲ ಚರ್ವಿತಂ ಯಸ್ತು ಪ್ರಕ್ಷಿಪೇ ನ್ಮಮ ಮನ್ದಿರೇ । ಸ ಯಾತಿ ನರಕಂ ಘೋರಂ ಯಾವದಾಭೂತ ಸಂಪ್ಲವಮ್ ॥೧೦॥ ತತೋ ಮುಕ್ತೋ ಮಹಾಭಾಗೇ ಶುನಕೋಽಪರಜನ್ಮನಿ । ಸಂಸ್ಥಿತ ಸ್ತ್ರೀಣಿ ಜನ್ಮಾನಿ ವಸತ್ಯೇವ ನಸಂಶಯಃ ॥೧೧॥ ನಿಷ್ಠೀವನಕರೋ ಯಸ್ತು ಮನ್ದಿರೇ ಮಮ ಸುನ್ದರಿ । ಕೃಮಿಭಕ್ಷ್ಯೇ ಪತೇ ದ್ಘೋರೇ ನರಕೇ ಪಾಪಕೃನ್ನರಃ॥ಶ್ಲೇಷ್ಮಾತಕತರು ರ್ಭೂತ್ವಾ ಜಾಯತೇ ಜನ್ಮ ಪಞ್ಚಕಮ್ ॥೧೨॥ ಶ್ಮಶಾನಮಧ್ಯೇ ಗತ್ವಾತು ಯೋ ನರೋ ಮಾ ಮಘಾರ್ಚಯೇತ್ । ಸಪ್ತ ಜನ್ಮಕೃತಾ ತ್ಪುಣ್ಯಾ ತ್ತತ್ಕ್ಷಣಾ ನ್ಮುಚ್ಯತೇನ**

---

ತಾಂಬೂಲವನ್ನು ಹಾಕಿಕೊಂಡು ಯಾವನಾದರೆ ನನ್ನ ಆಲಯದಲ್ಲಿ ಅದನ್ನುಗಿಯುವನೋ ಅಂತವನು ಅತಿಘೋರಗಳಾದ ನರಕಯಾತನೆಗಳನ್ನು ಪ್ರಲಯಕಾಲಪರ್ಯಂತವೂ ಅನುಭವಿಸಿ ಬಳಿಕ ಅವುಗಳಿಂದ ಬಿಡುಗಡೆಯನ್ನು ಹೊಂದಿ ಮೂರು ಜನ್ಮಗಳು ನಾಯಿಯಾಗಿ ಹುಟ್ಟುವುದರಲ್ಲಿ ಸಂಶಯವೇ ಇಲ್ಲವು. ॥ ೧೦ ॥ ೧೧ ॥

ನನ್ನ ದಿವ್ಯಾಲಯದಲ್ಲಿ ಎಂಜಲನ್ನು ವುಗಿಯುವ ಪಾಪಿಷ್ಠನು ತನ್ನ ದೇಹವನ್ನು ಕ್ರಿಮಿಗಳಿಗೆ ಆಹಾರವನ್ನಾಗಿ ಕೊಡುವ ಘೋರವಾದ ನರಕದಲ್ಲಿ ಬೀಳುವನು. ಅನಂತರ ನಿಃಹೀನವಾದ ಶ್ಲೇಷ್ಮಾತಕ (ಇದಕ್ಕೆ ಆಂಧ್ರಭಾಷೆಯಲ್ಲಿ ವಿರಿಗಿಚೆಟ್ಟು ಎನ್ನುವರು) ವೆಂಬ ವೃಕ್ಷವಾಗಿ ಐದುಜನ್ಮಗಳು ಹುಟ್ಟುವನು. ॥ ೧೨ ॥

ಯಾವನಾದರೆ ಸ್ಮಶಾನಕ್ಕೆ ಹೋಗಿ ಸ್ನಾನಾದಿ ದೇಹಶುದ್ಧಿಯನ್ನು ಮಾಡಿಕೊಳ್ಳದೆ ನನ್ನನ್ನರ್ಚಿಸುವನೋ ಅಂತವನು ಏಳುಜನ್ಮಗಳಿಂದ ಸಂಪಾದಿಸಲ್ಪಟ್ಟ ಪುಣ್ಯಗಳಿಂದ ತತ್ಕ್ಷಣದಲ್ಲಿ ಬಿಡಲ್ಪಟ್ಟು ಬಳಿಕ ಮೂರು ಜನ್ಮಗಳು ಸ್ಮಶಾನವನ್ನು ಕಾಯುವ ನರಿಯಾಗಿ ಹುಟ್ಟುವನು. (ಈ ಶ್ಲೋಕದಿಂದ ಸ್ಮಶಾನಕ್ಕೆ ಹೋಗಿಬಂದ ದಿವಸದಲ್ಲಿ ಸ್ನಾನಾದಿಶುದ್ಧಿಯನ್ನು ಮಾಡಿಕೊಂಡರೂ ದೇವರಪೂಜೆ ಮಾಡಬಾರದೆಂದು ತೋರುವುದು.)

ರಃ ॥ ಸೂರ್ಣ್ಯಾಂ ಯೋನಿ ಮಾಶ್ರಿತ್ಯ ವಸೇ ಜ್ಜನ್ಮತ್ರಯಂ ಶುಭೇ ॥೧೩॥ ಮೂತ್ರಯೇ ನ್ಮಂದಿರೇ ಯಸ್ತು ಮಮ ದೇವಿ ಶುಭಾನನೇ ।, ಸಮೂತ್ರಗರ್ತನರಕೇ ಪತತ್ಯೇವ ಹ್ಯವಾಕ್ಛಿರಾಃ ॥ ೧೪ ॥ ತಸ್ಮಾನ್ಮುಕ್ತಸ್ತು ರಕ್ತಾದಿ ನಿಂಬಕದ್ರುಮಮಾಸ್ಥಿತಃ । ಜನಿಷ್ಯತಿ ವರಾರೋಹೇ ಹ್ಯಷ್ಟಜನ್ಮಾನಿ ಸೌಕರೀಮ್ ॥೧೫॥ ಪುರೀಷಂ ವಾ ಪ್ರಕುರ್ವೀತ ಯೋನರೋ ಮಮ ಮನ್ದಿರೇ । ಸಯಾತಿ ನರಕಾ ನ್ಘೋರಾ ನ್ಪರ್ಯಾಯೇ ಣೈಕವಿಂಶತಿಮ್ ॥ ತತೋ ಮುಕ್ತೋ ಮಹಾಭಾಗೆ ವಿಷ್ಠಾಯಾಂ ಜಾಯತೆ ಕ್ರಿಮಿಃ ॥ ೧೬ ॥ ಅನುಗಮ್ಯ ಯಥಾ ಪ್ರೇತ ಮಿಚ್ಛಯಾ ಯಸ್ತು ಮಾನವಃ ॥ ಆರಾಧಿತು ಮಥೇಚ್ಛೇನ್ಮಾಂ ಸ ವ್ರಜ ತ್ಯಧಮಾಂ ಗತಿಮ್ । ಬಲಿಭುಗ್ಯೋನಿತಾಂ ಯಾತಿ ಜನ್ಮಾನಿ ಭುವಿ ಭೂಧರೇ ॥೧೭॥ ಭರಣಂ ತು ತಥಾ ಕೃತ್ವಾ ಮೃತಕಸ್ಯ ವಸುಂಧರೇ । ಮನ್ದಿರಂ

---

ಎಲೈ ಸುಮುಖಿಯೆ ? ಯಾವನಾದರೆ ನನ್ನ ದಿವ್ಯಾಲಯದಲ್ಲಿ ಮೂತ್ರವಿಸರ್ಜನೆ ಮಾಡುವನೊ ಅಂತವನು ಮೂತ್ರಗರ್ತವೆಂಬ ಘೋರವಾದ ನರಕದಲ್ಲಿ ತಲೆಕೆಳಗಾಗಿ ಬಿದ್ದು ಮಹಾಯಾತನೆಗಳನ್ನನುಭವಿಸಿದ ಬಳಿಕ ಆ ನರಕಯಾತನೆಗಳಿಂದ ಬಿಡುಗಡೆಯನ್ನು ಹೊಂದಿ ರಕ್ತಾಕ ನಿಂಬಕಾದಿ ವಿಷವೃಕ್ಷಗಳಲ್ಲಿ ಕೆಲವುಕಾಲ ಇದ್ದುಕೊಂಡು ಹಂದಿಜಾತಿಯಲ್ಲಿ ಎಂಟು ಜನ್ಮಗಳು ಹುಟ್ಟುವನು. ॥ ೧೪ ॥ ೧೫ ॥

ಯಾವನಾದರೆ ದೇವಸ್ಥಾನಗಳಲ್ಲಿ ಮಲವಿಸರ್ಜನೆ ಮಾಡುವನೋ ಅಂತವನು ಕ್ರಮಕ್ರಮವಾಗಿ ಏಕವಿಂಶತಿ (೨೧) ಮಹಾನರಕಗಳನ್ನನುಭವಿಸಿದ ಬಳಿಕ ಅವುಗಳಿಂದ ಬಿಡುಗಡೆಯನ್ನು ಹೊಂದಿ ವಿಷ್ಠೆಯಲ್ಲಿ ಕ್ರಿಮಿಯಾಗಿ ಹುಟ್ಟುವನು. ॥ ೧೬ ॥

ಯಾವನಾದರೆ ಐಚ್ಛಿಕವಾಗಿ ಶವಾನುಗಮನವನ್ನು ಮಾಡಿ ನನ್ನನ್ನಾರಾಧಿಸಲು ಇಚ್ಛೈಸುವನೋ ಅವನು ಅಧೋಗತಿಯನ್ನು ಹೊಂದಿ ಅನೇಕ ಜನ್ಮಗಳು ಭೂಮಿಯಲ್ಲಿ ಕಾಗೆಯಾಗಿ ಹುಟ್ಟುವನು. ॥ ೧೭ ॥

ನ ಪ್ರವೇಷ್ಟವ್ಯಂ ಪ್ರವಿಷ್ಟಸ್ಯ ಫಲಂ ಶೃಣು ॥ ೧೮ ॥
ಚಾಣ್ಡಾಲೀಂ ಯೋನಿ ಮಾಶ್ರಿತ್ಯ ಜನ್ಮಕೃನ್ನವಪಂಚ
ಚ । ಭವಿಷ್ಯತಿ ವರಾರೋಹೇ ವ್ಯಾಧಃ ಕ್ರೂರೋ ಥ
ನಿಷ್ಠುರಃ ॥೧೯॥ ಭುಕ್ತ್ವಾ ವೈ ಶ್ರಾದ್ಧಂ ಮಹಾಭಾಗೇ ಮ
ನ್ನುಚೇ ಮಾ ಮಥಾರ್ಚಯೇತ್ । ಚಟಕತ್ವ ಮನು
ಪ್ರಾಪ್ಯ ತತೋ ಗೋಧಾವಪುರ್ಗತಃ ॥ ೨೦ ॥ ಛಾಯಾ
ಮಾಕ್ರಮ್ಯ ಯೋ ಮೋಹಾ ದ್ವಿಮಾನಸ್ಯ ವಸುಂಧರೇ।
ಪ್ರದಕ್ಷಿಣ ಮಕುರ್ವಂಸ್ತು ಯಸ್ತಿಷ್ಠೇನ್ನತಿಪೂರ್ವಕ
ಮ್ ॥೨೧॥ ತಿಷ್ಠೇತ್ಸ ಕಾನನೇ ಶೂನ್ಯೇ ರಣ್ಣೈ ರ್ಬ
ಹುಭಿ ರ್ವೃತಃ । ಫಲಪುಷ್ಪವಿಹೀನಸ್ಚ ಅರಣ್ಯೇ ಶೂನ್ಯ
ವೃಕ್ಷತಾಮ್ ॥೨೨॥ ಸಮೀಪೇ ಮನ್ದಿರಸ್ಯಾಪಿ ಶಕೃನ್ಮೂ
ತ್ರಂ ಕರೋತಿ ಯಃ । ಸ ತಿಷ್ಠೇ ದ್ರೌರವೇ ಘೋರೇ

---

....ಹಾಗೆಯೇ ಹೆಣವನ್ನು ಹೊತ್ತುಹಾಕಿ ನನ್ನ ಆಲಯದಲ್ಲಿ ಪ್ರವೇಶಿಸ ಬಾರದು. ಪ್ರವೇಶಿಸಿದ್ದೇ ಆದರೆ ಅಂತವನಿಗುಂಟಾಗುವ ಅನಿಷ್ಟಫಲವನ್ನು ಕೇಳು. ಹದಿನಾಲ್ಕು ಜನ್ಮಗಳು ಚಂಡಾಳನಾಗಿ ಹುಟ್ಟಿ ಅನಂತರ ಕ್ರೂರನಾದ ಬೇಡರಜಾತಿಯಲ್ಲಿ ಹುಟ್ಟಿ ಕಠಿನಮನಸ್ಕನಾಗಿರುವನು. ॥ ೧೯ ॥

ಮತ್ತು ಶ್ರಾದ್ಧಭೋಜನವನ್ನು ಮಾಡಿ ನನ್ನನ್ನು ಅರ್ಚಿಸುವಂತವನು ಚಟಕವೆಂಬ ಗುಬ್ಬಚ್ಚಿಪಕ್ಷಿಯ ಜನ್ಮವನ್ನು ಮೊದಲುಯೆತ್ತಿ ಒಳ್ಳೆ ಕೊಂಡೇಕೇತ ಜನ್ಮವನ್ನು ಎತ್ತುವನು. ॥ ೨೦ ॥

ಯಾವನಾದರೆ ದೇವಸ್ಥಾನದಲ್ಲಿ ಪ್ರದಕ್ಷಿಣ ಮಾಡುವಾಗ ತಿಳುವಳಿಕೆಯಿಲ್ಲದೆ ವಿಮಾನಛಾಯೆಯನ್ನು ತುಳಿಯುವನೋ ಮತ್ತು ಪ್ರದಕ್ಷಿಣವನ್ನು ಮಾಡದೇ ಕೇವಲ ನಮಸ್ಕಾರವನ್ನು ಮಾತ್ರ ಮಾಡಿ ನಿಂತಿರುವನೋ ಅಂತವನು ಶೂನ್ಯವಾದ ಅರಣ್ಯದಲ್ಲಿ ಮುಳ್ಳುಗಳಿಂದ ಸುತ್ತಲ್ಪಟ್ಟ ಫಲಪುಷ್ಪರಹಿತವೂ ಆಗಿರುವ ಶೂನ್ಯವೃಕ್ಷನಾಗಿ ಹುಟ್ಟುವನು. ॥೨೧॥೨೨॥

ನನ್ನ ದಿವ್ಯಾಲಯದ ಸಮೀಪದಲ್ಲಾದರೂ ಮಲಮೂತ್ರ ವಿಸರ್ಜನ ಮಾಡತಕ್ಕವನು ಘೋರವಾದ ರೌರವನರಕದಲ್ಲಿ ಹತ್ತುಲಕ್ಷ ವರ್ಷಗಳ ಪರ್ಯಂತನಾಗಿ ಯಾತನಾನುಭವವನ್ನು ಮಾಡುವನು. ॥ ೨೨ ॥ ಅನಂತರ

ವರ್ಷಾಣಾ ಮಯುತಂ ಶತಮ್ ॥೨೩॥ ತತೋಽಪಿ ಮ
ನುಜೋ ಮುಕ್ತೋ ಗ್ರಾಮಶೂಕರ ಜಾತಿತಾಮ್ ।
ಗ್ರಾಮೇ ಜನ್ಮಶತಂ ಸುಭುಙ್ತ ವಿಷ್ಠಾಭು ಕ್ಸೂಕರಸ್ತ
ಥಾ ॥ ಅನಿಬದ್ಧಪ್ರಲಾಪಾರ್ ಯೇ ಕುರ್ವತೇ ಮಮಸ
ನ್ನಿಧೌ । ತೇಽಪಿ ತಿತ್ತಿರಿತಾಂ ಭೂತ್ವಾ ಜಾಯನ್ತೆ ಜನ್ಮ
ಪಞ್ಚಕಮ್ ॥ ೨೪ ॥ ಆರೋಪಿತಂ ಪ್ರದೀಪಂ ಯೇ ನ
ಯಂತ್ಯನ್ಯತ್ರ ಮನ್ದಿರಾತ್ । ಅಂಧಾಸ್ತೇಽಪಿ ಭವಿಷ್ಯ
ನ್ತಿ ಜನ್ಮಾನಿ ನವಪಂಚಚ ॥ ೨೫ ॥ ಕಥಾಯಾಂ ಕಥ್ಯ
ಮಾನಾಯಾಂ ಮನ್ದಿರೇ ಮೇ ವರಾನನೇ । ಅನಾದೃ
ತ್ಯಚ ಯೇಽಯಾನ್ತಿ ತೇಷಾಂ ಪಾಪಫಲಂ ಶೃಣು ॥ ಬ
ಧಿರಾಸ್ತೇ ಭವಿಷ್ಯನ್ತಿ ಮೂಕಾವೈ ಜನ್ಮಪಞ್ಚಕ
ಮ್ ॥ ೨೭ ॥ ಪಾದೌಪ್ರಸಾರ್ಯ ಯೇ ಗೇಹೇ ಶೇರತೇ
ಮೇ ನರಾಧಮಾಃ । ಲಾಲಾಂ ವಿಸೃಜ್ಯ ಚೋಽಚ್ಛಿಷ್ಟಾಂ

---

ಅವರಿಂದ ಬಿಡುಗಡೆಯನ್ನು ಹೊಂದಿ ಊರುಹಂದಿಯ ಜನ್ಮದಲ್ಲಿ ಹುಟ್ಟಿ
ನೂರು ಜನ್ಮಗಳಪರ್ಯಂತ ಮಲವನ್ನು ತಿನ್ನುತ್ತಾ ಇರುವನು. ॥ ೨೩ ॥

ನನ್ನ ಸನ್ನಿಧಿಯಲ್ಲಿ ಮನಸ್ಸಿಗೆ ಬಂದಹಾಗೆಲ್ಲಾ ಸ್ವೇಚ್ಛಾಪ್ರಲಾಪ
(ನಿರರ್ಥಕವಾದ ಮಾತನ್ನು) ಗಳನ್ನು ಆಡುವಂತವರುಕೂಡ ಐದು ಜನ್ಮ
ಗಳು ತಿತ್ತಿರಿಪಕ್ಷಿಯಾಗಿ ಹುಟ್ಟುವರು. ॥ ೨೪ ॥

ಯಾರಾದರೆ ನನ್ನ ಸನ್ನಿಧಿಯಲ್ಲಿ ಆರೋಪಿತವಾದ ದೀಪವನ್ನು ಬೇರೆ
ಕಡೆ ತೆಗದುಕೊಂಡು ಹೋಗಿ ಕಾರ್ಯಾಂತರದಲ್ಲಿ ಉಪಯೋಗಿಸುತ್ತಾರೊ
ಅಂತವರು ಹದಿನಾಲ್ಕು ಜನ್ಮಗಳು ಕಣ್ಣಿಲ್ಲದ ಅಂಧರಾಗಿ ಹುಟ್ಟುವರು.

ನನ್ನ ದಿವ್ಯಾಲಯದಲ್ಲಿ ದಿವ್ಯಕಥಾ ಪ್ರಸಂಗಗಳು ನಡಿಯುವಾಗ
ಅದನ್ನು ಆದರಿಸದೇ ಯಾರಾದರೆ ಹೊರಗೆ ಹೋಗುವರೊ ಅಂತವರ ಪಾಪ
ಫಲವನ್ನು ಹೇಳುವೆನು ಕೇಳು. ಅವರು ಕಿವುಡರಾಗಿಯೂ ಮೂಗರಾ
ಗಿಯೂ ಐದು ಜನ್ಮಗಳು ಹುಟ್ಟುವರು ॥ ೨೭ ॥

ನನ್ನ ಆಲಯದಲ್ಲಿ ಕಾಲುಚಾಚಿಕೊಂಡು ಮಲಗುವಂತವರಿಗೂ
ಮೂಗಿನ ಮಲವನ್ನು ವಿಸರ್ಜಿಸುವಂತವರಿಗೂ ಉಂಟಾಗುವ ಪಾಪಫಲ

ತೇಷಾಂ ಪಾಪಫಲಂ ಶೃಣು ॥ ತೋಯಹೀನೇ ತಿರ
ದ್ರೇಚ ವನೇವೈ ಶೂನ್ಯವೃಕ್ಷತಾಮ್ । ಜಾಯನ್ತೇಸಪ್ತ
ಜನ್ಮಾನಿ ತತಶ್ಚಣ್ಡಾಲತಾಂ ಯಯುಃ ॥ ದರಿದ್ರಾಶ್ಚೈ
ವ ಮೂರ್ಖಾಶ್ಚ ಭವಿಷ್ಯನ್ತಿ ತ್ರಿಜನ್ಮಕಮ್ ॥ ೨೮ ॥
ಅನ್ಯದೇವಾರ್ಥಸನ್ದಿಷ್ಟೈಃ ಪುಷ್ಪೈರ್ಯೋ ಮಾ ಮ
ಥಾರ್ಚಯೇತ್ । ಮವ್ಯೈವತು ಮಹಾಗೇಹೇ ಮೂಣ್ಡ
ಕತ್ವಂ ವ್ರಜನ್ತಿ ತೇ ॥ ಜನ್ಮದ್ವಯಂತು ವೈ ಮೂಢಾ
ಶ್ಶೂದ್ರತಾಂ ಯಾನ್ತಿ ತೇ ನರಾಃ ॥೨೯॥ ಅನ್ಯ ದೇವ
ಗೃಹಂ ಗತ್ವಾ ಹ್ಯಸ್ನಾತ್ವಾ ಯೋ ವ್ರಜೇದ್ಗೃಹಮ್ ।
ಮಮೈವ ವಸುಧೇ ತಸ್ಯ ಫಲಂ ಪಾಪಸ್ಯ ಮೇ ಶೃಣು॥
ಗೃಹಾದ್ಗೃಹ ಮಥೋ ಗತ್ವಾ ಭಿಕ್ಷಾರ್ಥೀ ಕ್ಷುಧಿತ ಸ್ಸ್ವ
ಯಮ್ । ಭಿಕ್ಷಾಮಲಬ್ಧ್ವಾ ತತ್ರಾಪಿ ದರಿದ್ರೋ ಜಾಯ
ತೇ ನರಃ ॥೩೦॥ ಚತ್ವಾರಿಶ್ಚೈವ ಜನ್ಮಾನಿ ತೇಷಾ ಮನ್ತೇ
ಚ ಯೋ ಬುಧಃ । ಚಣ್ಡಾಲಯೋನಿ ಮಾಪ್ನೋತಿ

---

ವನ್ನು ಕೇಳು. ಅಂತವರು ಅತ್ಯಂತ ಕಠಿನವಾದ ನೀರಿಲ್ಲದ ಕಾಡಿನಲ್ಲಿ ಫಲ ಪುಷ್ಪಾದಿವಿಹೀನವಾದ ಶೂನ್ಯವೃಕ್ಷವಾಗಿ ಏಳು ಜನ್ಮಗಳು ಹುಟ್ಟಿದಬಳಿಕ ಚಂಡಾಳ ಜನ್ಮದಲ್ಲಿ ದರಿದ್ರರಾಗಿಯೂ ಮೂರ್ಖರಾಗಿಯೂ ೩ ಜನ್ಮಗಳಿರುವರು. ॥ ೨೮ ॥

ದೇವತಾಂತರ ಪೂಜಾರ್ಥವಾಗಿ ಇಡಲ್ಪಟ್ಟ ಪುಷ್ಪಗಳಿಂದ ಯಾರಾದರೆ ನನ್ನನ್ನು ಪೂಜಿಸುವರೋ ಮೂಢರಾದ ಅಂತವರು ಕಪ್ಪೆಯಾಗಿ ಹುಟ್ಟಿದಬಳಿಕ ೩ ಜನ್ಮದಲ್ಲಿ ಮೂಢರಾದ ಶೂದ್ರಜಾತೀಯರಾಗಿ ಹುಟ್ಟುವರು.

ಎಲೈ ಭೂದೇವಿಯೇ ! ದೇವತಾಂತರಾಲಯವನ್ನು ಪ್ರವೇಶಿಸಿ ಸ್ನಾನ ಮಾಡದೆ ನನ್ನ ಆಲಯಕ್ಕೆ ಪ್ರವೇಶಿಸುವಂತವನ ಫಲವನ್ನು ವಿವರಿಸುವೆನು ಕೇಳು. ಅಂತವನು ಪ್ರತಿಯೊಂದು ಗೃಹದಲ್ಲಿಯೂ ಭಿಕ್ಷಾರ್ಥಿಯಾಗಿ ಸಂಚರಿಸಿ ಭಿಕ್ಷೆಯನ್ನು ಹೊಂದದೆ ಅತ್ಯಂತ ಕ್ಷುದಾತುರನಾಗಿ ದಾರಿದ್ರ್ಯವನ್ನು ಹೊಂದುವಂತವನಾಗುವನು. ಈರೀತಿಯಾಗಿ ನಾಲ್ಕು ಜನ್ಮಗಳು ಹುಟ್ಟಿದ ಬಳಿಕ ಹದಿನೈದು ಜನ್ಮಗಳು ಚಂಡಾಲನಾಗಿ ಹುಟ್ಟುವನು. ॥ ೩೦ ॥

**ಜನ್ಮಾನಿ ದಶಪಂಚಚ ॥೩೧॥ ಅನ್ಯದೇವಸಮಂ ಯಸ್ತು ಮನ್ಯತೇವಾಂತು ಸೋ ಧಮಃ । ಚಣ್ಡಾಲ ಯೋನಿ ತಾಂ ಯಾತಿ ಜನ್ಮಾನಿ ನವಪಞ್ಚ ಚ ॥೩೨॥ ಕುಸುಮಾ ನಾಂ ನಿವೇದ್ಯಾನಾಂ ಗಂಧ ಮಾಘ್ರಾತಿ ಯೋ ನರಃ । ಸಪೂತಿಗಂಧ ಸಂಯುಕ್ತ ಕುಷ್ಠೀಚೈವ ಧರೇ ಶುಭೇ ॥ ಭವತಿತ್ರೀಣಿ ಜನ್ಮಾನಿ ಭವತ್ಯೇವ ನಸಂಶಯಃ ॥೩೩॥ ವಿಷ್ಣುಸ್ಥಾನಸಮಾಪನ್ನಾ ವಿಷ್ಣುಸೇವಾರ್ಥ ಮಾಗ ತಾನ್ । ಶ್ವಪಚಾನ್ ಪತಿತಾನ್ವಾಪಿ ಸ್ಪೃಷ್ಟ್ವಾನ ಸ್ನಾನ ಮಾಚರೇತ್ ॥ ಉತ್ಸವೇ ವಾಸುದೇವಸ್ಯ ಪತನ್ತಿ ನರ ಕೇಕ್ಷಣಾತ್ ॥೩೪॥ ಪಿಬೇ ತ್ಪಾದೋದಕಂ ವಿಷ್ಣೋಃ**

---

ನನ್ನನ್ನು ದೇವತಾಂತರಕ್ಕೆ ಸಮವಾಗಿ ಎಣಿಸುವಂತಹ ಅಧಮನು ಚಂಡಾಲಯೋನಿಯಲ್ಲಿ ಹದಿನಾಲ್ಕು ಜನ್ಮಗಳು ಹುಟ್ಟುವನು. ॥ ೩೧ ॥

ಭಗವನ್ನಿವೇದನಕ್ಕೆ ಯೋಗ್ಯವಾದ ಪುಷ್ಪಗಳ ಗನ್ಧವನ್ನು ಮೂಸಿ ನೋಡತಕ್ಕವನು ಮಹಾದುರ್ಗಂಧದಿಂದ ಕೂಡಿದ ಕುಷ್ಠರೋಗವುಳ್ಳವ ನಾಗುವನು. ಈರೀತಿ ೩ ಜನ್ಮಗಳು ಹುಟ್ಟುವದರಲ್ಲಿ ಸಂಶಯುವೆ ಇಲ್ಲವು.

ವಿಷ್ಣು ದಿವ್ಯಾಲಯ ಸಮಾಸ್ಥರಾಗಿಯೂ ವಿಷ್ಣು ಸೇವಾರ್ಥವಾಗಿ ಬಂದಿರತಕ್ಕವರಾಗಿಯೂ ಇರತಕ್ಕವರು ಶ್ವಪಚರಾಗಿಯಾದರೂ ಪತಿತರಾ ಗಿಯಾದರೂ ಇರಲಿ ಅಂತವರನ್ನು ಸ್ಪರ್ಶಿಸಿ ಸ್ನಾನವನ್ನು ಮಾಡಬಾರದು. ಶ್ರೀವಾಸುದೇವನ ಮಹೋತ್ಸವದಲ್ಲಿ ,ಇಂತವರನ್ನು ಸ್ಪರ್ಶಿಸಿದ ಪ್ರಯುಕ್ತ ಅಶುಚಿಯಾದೆನೆಂದು ಯಾವನಾದರೆ ಸ್ನಾನವನ್ನು ಮಾಡುವನೊ ಅಂತವನ ಪಿತೃಗಳು ಸ್ವರ್ಗಲೋಕವಾಸಿಗಳಾಗಿದ್ದರೂ ತತ್ಕ್ಷಣದಲ್ಲಿ ನರಕದಲ್ಲಿ ಬೀಳು ವರು.

ಭಗವತ್ತೀರ್ಥವನ್ನಾದರೂ ಭಗವದ್ಭಕ್ತರ ಪಾದತೀರ್ಥವನ್ನಾದರೂ ಸ್ವೀಕಾರ ಮಾಡಿದ ಬಳಿಕ ಆಚಮನವನ್ನು ಮಾಡಬಾರದು. ಸೋಮಪಾ ನದಲ್ಲಿ ಆಚಮನವು ಹ್ಯಾಗಾದರೆ ಇಲ್ಲವೊ ಅದರಂತೆ ಇಲ್ಲಿಯೂ ಆಚಮನ ವಿಲ್ಲವು. ॥ ೩೪ ॥

ಈರೀತಿಯಾಗಿ ಶ್ರೀವರಾಹ ಪುರಾಣದಲ್ಲಿ ಭೂದೇವಿಯ ಪ್ರಶ್ನೆ ಪ್ರಕರಣದಲ್ಲಿ ಭಗವದಪಚಾರ ನಿರೂಪಣವೆಂಬ ೮೫ನೆ ಅಧ್ಯಾಯವು.

ವೈಷ್ಣವಾನಾಂ ವಿಶೇಷತಃ । ತತ್ರ ನಾಚಮನಂ ಕುರ್ಯಾ
ದ್ಯಥಾ ಸೋಮೆ ದ್ವಿಜೋತ್ತಮಃ ॥ ॥೩೫॥
ಇತಿ ಶ್ರೀ ವರಾಹಪುರಾಣೇ ಧರಣೀಪ್ರಶ್ನೇ ದ್ವಾತ್ರಿಂಶ
ದಪಚಾರೋನಾಮ ಪಂಚಚತ್ವಾರಿಂಶೋಧ್ಯಾಯಃ.
ಅನ್ಯೇತು ದ್ವಾತ್ರಿಂಶದಪಚಾರಾಃ
ಪ್ರಕಾರಾನ್ತರೇಣಪಠ್ಯನ್ತೆ; ತತ್ರಚೇತ್ರಚೋಕ್ತಾನುಕ್ತ
ಸಮುಚ್ಚಯಃ ಕಾರ್ಯಃ, ತತ್ರೇಯಮೇವಪ್ರಕ್ರಿಯಾ.
ಅಪಚಾರಾ ಸ್ತಥಾ ವಿಷ್ಣೋ ರ್ದ್ವಾತ್ರಿಂಶತ್ಪರಿಕೀರ್ತಿತಾಃ ।
ಯಾನೈರ್ವಾ ಪಾದುಕೈರ್ವಾಪಿ ಗಮನಂಭಗವದ್ಗೃಹೇ॥೧
ದೇವೋತ್ಸವಾದ್ಯಸೇವಾಚಾ ಪ್ರಣಾಮಶ್ಚ ತದಗ್ರತಃ ।
ಏಕಹಸ್ತ ಪ್ರಣಾಮಶ್ಚ ತತ್ಪುರಸ್ತಾ ತ್ಪ್ರದಕ್ಷಿಣಂ ॥
ಉಚ್ಛಿಷ್ಟೇಚೈವ ಚಾಶೌಚೇ ಭಗವದ್ವಂದನಾದಿಕಂ ।
ಪಾದಪ್ರಸಾರಣಂಚಾಗ್ರೇ ತಥಾ ಪರ್ಯಜ್ಕಬಂಧನಂ॥೩॥

---

ಬೇರೆ ಕೆಲವರು ಪ್ರಕಾರಾಂತರವಾಗಿ ೩೨ ಅಪರಾಧಗಳನ್ನು ವಿವರಿಸುವರು. ಇಲ್ಲಿ ಹೇಳಿದ್ದನ್ನು ಹಿಂದೆಯೂ, ಹಿಂದೆ ಹೇಳಿದ್ದನ್ನು ಇಲ್ಲಿಯೂ ಸೇರಿಸಿಕೊಳ್ಳಬೇಕು. ಒಂದುಕಡೆ ಹೇಳಿದ ಮಾತ್ರದಲ್ಲಿಯೇ ಅಪರಾಧಗಳಲ್ಲವೆಂದು ಗ್ರಹಿಸಬಾರದು. ಅದರ ಕ್ರಮ ಹೇಗೆಂದರೆ:—

ಶ್ರೀಮಹಾವಿಷ್ಣುವಿನಲ್ಲಿ ಮಾಡಲ್ಪಡುವ ಅಪರಾಧಗಳು ೩೨ ಬಗೆಯಾಗಿರುವುವೆಂದು ಹೇಳಲ್ಪಡುವುವು. ವಾಹನದಮೇಲೆ ಕೂತುಕೊಂಡಾದರೂ ಪಾದುಕೆಯನ್ನು ಹಾಕಿಕೊಂಡಾದರೂ ಭಗವದಾಲಯಕ್ಕೆ ಹೋಗೋಣವೂ, ಉತ್ಸವಕಾಲದಲ್ಲಿ ದೇವರನ್ನು ನಮಸ್ಕರಿಸದೆ ಇರೋಣವೂ, ಎದುರಾಗಿ ದೇವರನ್ನು ಕಂಡವೊಡನೆ ನಮಸ್ಕಾರಮಾಡದೆ ಇರೋಣವೂ, ಒಂದೇ ಕೈಯ್ಯಿಂದ ನಮಸ್ಕಾರ ಮಾಡೋಣವೂ, ದೇವರಮುಂದೆ ತನ್ನನ್ನು ಪ್ರದಕ್ಷಿಣಮಾಡಿಕೊಳ್ಳೋಣವೂ, ಅಶುಚಿಯಾಗಿರುವಾಗಲೂ ಆಶೌಚಿಯಾಗಿರುವಾಗಲೂ ಭಗವದ್ವಂದನಾದಿಗಳನ್ನು ಮಾಡುವಿಕೆಯೂ, ದೇವರ ಮುಂದೆ ಕಾಲ್ಚಾಚಿಕೊಂಡಿರೋಣವೂ, ಅಲ್ಲಿ ಯೋಗಪಟ್ಟವನ್ನು ಕಟ್ಟಿಕೊಂಡು ಕೂತುಕೊಳ್ಳುವದೂ, ಮಲಗುವುದೂ, ಭೋಜನಮಾಡುವುದೂ, ಮಿಥ್ಯಾಭಾಷಣವೂ, ಘಟ್ಟಿಯಾಗಿ ಕೂಗಿಕೊಂಡು ಮಾತನಾ

**ಶಯನಂ ಭೋಜನಂಚೈವ ಮಿಥೋಭಾಷಣಮೇವಚ । ಉಚ್ಚೈರ್ಭಾಷಾ ವೃಥಾಜಲ್ಪೋ ರೋದನಾದ್ಯಂಚ ವಿಗ್ರಹಃ ॥೪॥ ನಿಗ್ರಹಾನುಗ್ರಹೌಚೈವ ಸ್ತ್ರೀಷು ಸಾಕೂತ ಭಾಷಣಂ । ಅಶ್ಲೀಲಕಥನಂಚೈವಾ ಪ್ಯಧೋವಾಯು ವಿಮೋಕ್ಷಣಂ ॥೫॥ ಕಮ್ಬಳಾವರಣಂಚೈವ ಪರನಿನ್ದಾ ಪರಸ್ತುತಿಃ । ಶಕ್ತೌ ಗೌಣೋಪಚಾರಾಶ್ಚಾ ಪ್ಯನಿವೇದಿತ ಭಕ್ಷಣಂ ॥೬॥ ತತ್ತತ್ಕಾಲೋದ್ಭವಾನಾಂಚ ಫಲಾದೀನಾ ಮನರ್ಪಣಂ । ವಿನಿಯುಕ್ತಾವಶಿಷ್ಟಸ್ಯ ಪ್ರದಾನಂ ವ್ಯಂಜನಾದಿಷು ॥೭॥ ಪೃಷ್ಠೀಕೃತ್ಯಾಸನಂಚೈವ ಪರೇಷಾ ಮಭಿವಾದನಂ । ಗುರೌ ಮೌನಂ ನಿಜಸ್ತೋತ್ರಂ ದೇವತಾನಿನ್ದನಂ ತಥಾ ॥ ೮ ॥ ಇತ್ಯೇವಂ ಪ್ರಕಿ**

---

ಡುವುದೂ, ವೃಥಾ ಮಾತುಗಳನ್ನಾಡುವುದೂ, ಅಮಂಗಲವಾದ ಮಾತನ್ನಾಡುವುದೂ, ನಗೋಣವೂ, ಅಳೋಣವೂ, ಕಲಹಮಾಡುವುದೂ, ಒಬ್ಬನನ್ನು ಶಿಕ್ಷಿಸುತ್ತೇನೆಂದು ನಿಗ್ರಹವಾಕ್ಯಗಳನ್ನಾಡುವುದೂ, ಅನುಗ್ರಹಿಸುತ್ತೇನೆನ್ನುವುದೂ, (ಶಿಕ್ಷಣರಕ್ಷಣಗಳು ಭಗವತ್ಕಾರ್ಯವಾದ್ದರಿಂದ ಅದರಲ್ಲಿ ಇವನು ಅನ್ವಯಿಸಬಾರದು) ಸ್ತ್ರೀಜನರಲ್ಲಿ ವಿಲಾಸವಾಕ್ಯಗಳನ್ನಾಡುವುದೂ, ಅಪಾನವಾಯು ವಿಮೋಕ್ಷಣವೂ, ಕಂಬಳಿಯನ್ನು ಹೊದ್ದುಕೊಂಡುತಿರುಗುವುದೂ, ಪರನಿಂದಾ ಪರಸ್ತುತಿಯನ್ನು ಮಾಡುವುದೂ, ತಾನು ಶಕ್ತನಾಗಿದ್ದರೂ ಪರಮಪುರುಷನಿಗೆ ಗೌಣವಾದ ಉಪಚಾರಗಳನ್ನು ಮಾಡುವುದೂ, ಭಗವನ್ನಿವೇದಿತವಲ್ಲದ ಪದಾರ್ಥಭಕ್ಷಣವೂ, ಆಯಾ ಕಾಲಗಳಲ್ಲುಂಟಾಗುವ ಫಲಪುಷ್ಪಾದಿಗಳನ್ನು ದೇವರಿಗೆ ಸಮರ್ಪಣಮಾಡದೆ ಇರುವಿಕೆಯೂ, ಬೇರೆ ವಿಷಯವಾಗಿ ವಿನಿಯೋಗಿಸಲ್ಪಟ್ಟ ಪದಾರ್ಥಗಳನ್ನು ಪರಮಾತ್ಮನಿಗೆ ನಿವೇದನಮಾಡುವುದೂ, ಪರಮಾತ್ಮನಿಗೆ ಪೃಷ್ಠಭಾಗವನ್ನು ತೋರಿಸಿಕೊಂಡು ಕೂತುಕೊಳ್ಳೋಣವೂ, ದೇವರನ್ನು ಬಿಟ್ಟು ಅನ್ಯರಿಗೆ ನಮಸ್ಕರಿಸೋಣವೂ, ಗುರುಗಳ ಸಮೀಪದಲ್ಲಿ ಅವರ ಗುಣಕೀರ್ತನಗಳನ್ನು ಮಾಡದೆ ಮೌನವಾಗಿರೋಣವೂ, ಅವರ ಸಾನ್ನಿಧ್ಯದಲ್ಲಿ ತನ್ನನ್ನು ಸ್ತುತಿಸಿಕೊಳ್ಳೋಣವೂ, ಭಗವನ್ನಿಂದನವೂ ಭಗವದಪರಾಧಗಳೆಂದು ಅಲ್ಲಲ್ಲಿ ಹೇಳಿರುವುದನ್ನು ಗ್ರಹಿಸಬೇಕು. ಹೀಗೆಯೆ ಭಗವದ್ಭಕ್ತನಾದ

ಯಾನ್ಯಪಿ ತತ್ರ ತತ್ರ ಗ್ರಾಹ್ಯಾಣಿ. ತಥಾ, ಪ್ರಮಾದಾ ದಪಿ ಕಿಂಚಿತ್ತಲಂ ಯಸ್ಸ್ಪೃಶೇ ದ್ವೈಷ್ಣವೋತ್ತಮಃ । ಉಪಚಾರ ಶತೇನಾಪಿ ನ ಕ್ಷಮಾಮಿ ವಸುಂಧರೇ ॥ ೯ ॥ ಸ್ವಾಧೀನ ಶಯನಂ ಜಲ್ಪಂ ಸ್ವಾಧ್ಯಾಯಂಚ ವಿಶೇಷತಃ । ಆಸನಾರೋಹಣಂಚೈವ ನಕುರ್ಯಾತ್ಕೇಶವಾಲಯೇ ॥ ೧೦ ॥ ಯೋ ವಿಷ್ಣೋಃ ಪ್ರತಿಮಾಕಾರೇ ಲೋಹಭಾವಂ ಕರೋತಿಚ । ಯೋ ಗುರೌ ಮಾನುಷಂ ಭಾವಮುಭೌ ನರಕಪಾತಿನೌ ॥ ॥೧೧॥

ಇತಿ ಶ್ರೀಪಾಂಚರಾತ್ರರಕ್ಷಾಯಾಂ ನಿತ್ಯವ್ಯಾಖ್ಯಾನಾವಸರೇ
ಅಪಚಾರ ಪ್ರಕ್ರಿಯಾದರ್ಶಿತಾವೇದಿತವ್ಯಾ.

ಸಮ್ಮಾರ್ಜನಾದಿಷು ದೇವಸ್ವಾಪಹಾರಾದಿದೋಷಕೀರ್ತನಮ್.
ಪಾದ್ಮೇ ಚರ್ಯಾಪಾದೇ ಷೋಡಶಾಧ್ಯಾಯೇ.

---

ವನು ಅಜಾಗರೂಕತೆಯಿಂದಾದರೂ ರಕ್ತವನ್ನು ಸ್ಪರ್ಶಿಸಿದರೆ ಅಂತವನು ನೂರು ಉಪಚಾರಗಳನ್ನು ಮಾಡಿ ಕ್ಷಮೆಯನ್ನು ಪ್ರಾರ್ಥಿಸಿದರೂ ಕ್ಷಮಿಸಲಾರೆನು. ಭಗವತ್ಸನ್ನಿಧಿಯಲ್ಲಿ ಸ್ವೇಚ್ಛೆಯಾಗಿ ಮಲಗೋಣವೂ ಕರ್ಕಶವಾದ ಧ್ವನಿಯಿಂದ ವೇದಾಧ್ಯಯನಮಾಡೋಣವೂ, ಭಗವದ್ವಿಗ್ರಹದಲ್ಲಿ ಲೋಹಬುದ್ಧಿಯೂ, ಆಚಾರ್ಯನಲ್ಲಿ ಮಾನುಷಬುದ್ಧಿಯೂ ಭಗವದಪರಾಧಗಳಾಗಿ ನರಕದಲ್ಲಿ ಬೀಳುವದಕ್ಕೆ ಕಾರಣಗಳಾಗುವುವು. ॥೧-೧೧॥

ಇನ್ನುಮುಂದೆ ದೇವಸ್ಥಾನವನ್ನು ಗುಡಿಸಿ ಸಾರಿಸಿ ರಂಗೋಲಿ ಇಡುವುದೇ ಮೊದಲಾದ ಸೇವೆಯನ್ನು ಮಾಡತಕ್ಕ ಭಾಗ್ಯಶಾಲಿಗಳ ಸುಕೃತಫಲವೂ ದೇವದ್ರವ್ಯಾಪಹಾರಿಗಳಿಗುಂಟಾಗುವ ಅನರ್ಥಗಳೂ ವಿವರಿಸಲ್ಪಡುವುವು.

ಪಾದ್ಮಸಂಹಿತೆಯ ಚರ್ಯಾಪಾದದ ೧೬ನೇ ಅಧ್ಯಾಯ.

ಶ್ರೀಮಹಾವಿಷ್ಣುವನ್ನು ನಮಸ್ಕರಿಸಿ ಚತುರ್ಮುಖಬ್ರಹ್ಮನು "ಭಗವದಾಲಯದಲ್ಲಿ ಗುಡಿಸುವುದು ಸಾರಿಸುವುದೇ ಮೊದಲಾದ ಸೇವೆಯನ್ನು ಮಾಡತಕ್ಕವರಿಗೂ, ದೇವರಿಗೆ ತುಲಸೀ ಪುಷ್ಪಾದಿ ಪೂಜೋಪಕರಣಗಳನ್ನೂ ಭೂಮಿಯೇ ಮೊದಲಾದ ದಾನವನ್ನು ಮಾಡತಕ್ಕವರಿಗೂ, ಭೂಷಣವಸ್ತ್ರಾದಿಗಳನ್ನು ಸಮರ್ಪಣೆ ಮಾಡತಕ್ಕವರಿಗೂ, ಉಂಟಾಗುವ

ಬ್ರಹ್ಮಾ॥ ಭಗವನ್ ಮಾರ್ಜನಾದೀನಿ ಮನ್ದಿರೇ ಕು
ರ್ವತಾಂ ನೃಣಾಂ । ವಿಷ್ಣೋಃ ಕ್ಷೇತ್ರಾದಿ ದಾತ್ರೄಣಾಂ
ಪೂಜೋಪಕರಣಾನಿಚ ॥೨೨॥ ಭೂಷಣಾನಿಚ ವಸ್ತ್ರಾದಿ
ಫಲಮಭ್ಯುದಯಾತ್ಮಕಂ । ಕೀದೃಕ್ಕೀದೃಕ್ಕೃತಾನ್ಯೇ
ವದತ್ತಾನ್ಯಪಹೃತಾನಿಚ ॥ ೨೩ ॥ ಅನರ್ಥಕರಮೇತನ್ಮೇ
ಸಂಶಯಾನಸ್ಯ ಕಥ್ಯತಾಮ್ ॥

ಶ್ರೀ ಭಗವಾನ್

ಮಾರ್ಜನಂ ಮನ್ದಿರೇ ವಿಷ್ಣೋಃ ಕುರ್ವನ್ ಸಮ್ಮಾ
ರ್ಷ್ಟಿ ದೇಹಜಂ ॥ ೨೪ ॥ ಮಲಂ ಪಾಪಾತ್ಮಕಂ ಸರ್ವಂ
ಪರತ್ರೇಹಚ ಸಮ್ಭೃತಂ । ಪ್ರತ್ಯಹಂ ಮಾರ್ಜನಂ ಕು
ರ್ವನ್ ಪ್ರತ್ಯಹಂ ಹನ್ತಿ ಕಿಲ್ಬಿಷಂ ॥೨೫॥ ಗೋಚರ್ಮ
ಮಾತ್ರಮಾಲಿಪ್ಯ ಗೋಮಯೇನಚ ಭೂತಲಂ ॥ ಆಲ
ಯೇ ಲಭತೇಸದ್ಯೋ ಗೋಪ್ರದಾನಫಲಂ ನರಃ ॥೨೬॥
ಮಾರ್ಜನಾಲೇಪನೇ ಕುರ್ವನ್ ವಿಷ್ಣೋರಾಯತನೇ ನರಃ ।

---

ಶ್ರೇಯಸ್ಸಾಧನವಾದ ಫಲವನ್ನೂ; ಭಗವದ್ದ್ರವ್ಯಾಪಹಾರಾದಿಗಳಿಗುಂಟಾ
ಗುವ ಅನರ್ಥಗಳನ್ನೂ ಸಂಶಯಗ್ರಸ್ತನಾದ ನನಗೆ ವಿವರಿಸಬೇಕೆಂದು"
ಪ್ರಶ್ನೆಮಾಡಲು ಅದಕ್ಕುತ್ತರವನ್ನು ಹೇಳುತ್ತಾರೆ. ॥೨೨-೨೩॥

ಶ್ರೀಮಹಾವಿಷ್ಣುವಿನ ಸನ್ನಿಧಿಯನ್ನು ಗುಡಿಸುವಂತಹನು ಪಾಪ
ವೆಂಬ ಮಲವು ತನ್ನ ದೇಹದಲ್ಲಿ ಎಷ್ಟು ಸೇರಿರುವುವೊ ಅವೆಲ್ಲವನ್ನೂ
ಎಂದರೆ ಇಹಲೋಕದಲ್ಲಿಯೂ ಪರಲೋಕದಲ್ಲಿಯೂ ಸಂಪಾದಿಸಲ್ಪಟ್ಟ
ಸಮಸ್ತ ಪಾಪಗಳನ್ನು ತೊಳೆಯುವನು. ಪ್ರತಿದಿನದಲ್ಲಿಯೂ ಭಗವತ್ಸ
ನ್ನಿಧಿಯನ್ನು ಗುಡಿಸುವಂತವನು ಪ್ರತಿದಿನದಲ್ಲಿಯೂ ಸಂಪಾದಿಸಲ್ಪಟ್ಟ
ಪಾಪಗಳನ್ನು ಕಳೆದುಕೊಳ್ಳುವನು. ॥ ೨೫ ॥

ಗೋಚರ್ಮ ಮಾತ್ರದಷ್ಟು ದೇವಾಲಯದ ಪ್ರದೇಶವನ್ನು ಗೋಮಯ
ದಿಂದ ಸಾರಿಸುವಂತವನು ಗೋದಾನ ಫಲವನ್ನು ಹೊಂದುವನು. ॥ ೨೬ ॥

ಭಗವದಾಲಯದಲ್ಲಿ ಮೇಲೆ ವಿವರಿಸಿದ ಎರಡು ಸೇವೆಯನ್ನು ಮಾಡು
ವಂತವನು ಬಹುಕಾಲದವರೆಗೂ ಸ್ವರ್ಗಲೋಕದಲ್ಲಿದ್ದು ಬಳಿಕ ಸುಕೃತ

ಉಷಿತ್ವಾಸುಚಿರಂ ಸ್ವರ್ಗೇ ಕರ್ಮಶೇಷೇಣ ಭೂತಲೇ ॥ ಭೂ
ಯೋಽಪಿಜಾಯತೇ ಭೂಪಃ ಕುಲೇಮಹತಿ ಪೂಜಿತೇ ॥೩೭॥
ಸ್ರಜಂಬಧ್ವಾ ಸುಮನಸಾಂ ಯಃ ಪ್ರಯಚ್ಛತಿ ವಿಷ್ಣ
ವೇ । ಸಭುಕ್ತ್ವಾ ವಿಪುಲಾನ್ ಭೋಗಾನ್ ನಾಕಪೃಷ್ಠೇ
ವಿರಾಜತೇ ॥೩೮॥ ದೀಪಾ ನಾರೋ ಪಯೇ ದ್ವಿಷ್ಣೋ
ರ್ಮನ್ದಿರೇ ಭ್ಯನ್ತರೇ ಬಹಿಃ । ದಿವಿ ದೇವವ ದಾಸಿತ್ವಾ
ಜಾಯತೇ ಪರಮಾರ್ಥವಿತ್ ॥೩೯॥ ನಿತ್ಯಾನ್ನೈಮಿ
ತ್ತಿಕಾನ್ವಾಪಿ ದೀಪಾನಾರೋಪಯೇನ್ನರಃ । ಬಹುದುಃ
ಖಸಮಾಕೀರ್ಣಂ ನರಕಂ ನೈವಪಶ್ಯತಿ ॥೪೦॥ ಅಹೋರಾ
ತ್ರಮನಿರ್ವಾಣಂ ದೀಪಮಾರೋಪಯೇನ್ನರಃ । ಸರ್ವ
ಪಾಪ ವಿಶುದ್ಧಾತ್ಮಾ ವಿಷ್ಣುಲೋಕೇ ಮಹೀಯತೇ ॥೪೧
ಉದಕಾಭ್ಯುಕ್ಷಣಂ ವಿಷ್ಣೋ ರಾಲಯೇ ವಿದಧಾತಿಯಃ ।

---

ಶೇಷದಿಂದ ಭೂಲೋಕದಲ್ಲಿ ಲೋಕಪೂಜ್ಯವಾಗಿರುವ ಮಹೋತ್ತಮವಾದ
ರಾಜಕುಲದಲ್ಲಿ ಮಹಾರಾಜನಾಗಿ ಹುಟ್ಟುವನು. || ೩೭ ||

ಪುಷ್ಪಗಳ ಹಾರವನ್ನು ಕಟ್ಟಿ ದೇವ ಗೆ ಸಮರ್ಪಿಸುವಂತವನು
ಇಹಲೋಕದಲ್ಲಿ ವಿಪುಲವಾದ ದಿವ್ಯಸುಖಗಳನ್ನನುಭವಿಸಿ ಸ್ವರ್ಗಸುಖ
ವನ್ನೂ ಬಹುಕಾಲ ಅನುಭವಿಸುವನು. ಅಥವಾ ಅಂತವನು ಮೋಕ್ಷವನ್ನೇ
ಹೊಂದುವನು. ನಾಕಶಬ್ದವು ಪರಮಪದಕ್ಕೂ ವಾಚ್ಯವಾಗಿರುವುದಷ್ಟೆ.

ದೇವಸ್ಥಾನದ ಒಳಗೂ ಹೊರಗೂ ದೀಪಾರೋಪಣ ಮಾಡುವಂತ
ವನು ದೇವಲೋಕದಲ್ಲಿ ದೇವತೆಗಳಂತೆ ಕೆಲವುಕಾಲವಿದ್ದು ಪರತತ್ವವನ್ನು
ತಿಳಿಯುವಂತಹ ಮಹಾಭಾಗವತನಾಗಿ ಹುಟ್ಟುವನು. || ೩೯ ||

ಪ್ರತಿನಿತ್ಯವಾಗಲಿ ಒಂದು ನಿಮಿತ್ತದಿಂದಾಗಲಿ ಯಾವನಾದರೆ ಭಗವ
ದಾಲಯದಲ್ಲಿ ದೀಪಾರೋಪಣವನ್ನು ಮಾಡುತ್ತಾನೆಯೊ ಅಂತವನು ಬಹು
ದುಃಖಾಕುಲವಾದ ನರಕವನ್ನು ಕಣ್ಣಿನಿಂದ ಕೂಡ ನೋಡಲಾರನು. ||೪೦||

ಅಹೋರಾತ್ರವು ವಿಚ್ಛಿತ್ತಿಯಿಲ್ಲದೇ ಅಖಂಡದೀಪವನ್ನಾರೋಪಿಸು
ವಂತವನು ಸಮಸ್ತ ಪಾಪಗಳಿಂದಲೂ ಬಿಡಲ್ಪಟ್ಟು ಶ್ರೀವಿಷ್ಣುಲೋಕ
ವನ್ನೇ ಹೊಂದುವನು. || ೪೧ ||

ಲೋಕಂ ವಾರುಣಂ ಪ್ರಾಪ್ಯ ರಮತೇ ವತ್ಸರಾನ್ ಬಹೂನ್ ॥೪೨॥ ಸಮ್ಮಾರ್ಜ್ಯ ಲಿಪ್ಯ ಚ ಹರೇ ರ್ಧಾಮ ಪುಷ್ಪಾಣಿ ಭೂತಲೇ । ವಿಕಿರನ್ಮನುಜಸ್ಸರ್ವಾ ಕಾಮಾನಾಪ್ನೋತಿ ಪುಷ್ಕಲಾನ್ ॥೪೩॥ ವಿಷ್ಣುಸಾತ್ಕುರುತೇ ಭೂಮಿಂ ಸಸ್ಯಾಢ್ಯಾಂ ಫಲಪ್ರದಾಮ್ । ಯಸ್ಸ ಲೋಕಾನವಾಪ್ನೋತಿ ಸರ್ವಾನೇವ ನಸಂಶಯಃ ॥೪೪॥ ಪುಷ್ಪೋದ್ಯಾನ ಪ್ರದಾನೇನ ತಪೋಲೋಕೇ ಮಹೀಯತೇ । ಫಲವೃಕ್ಷ ಸರೋಪೇತಂ ಪೂಗಭೂಮಿಂ ಜಲಾನ್ವಿತಾಮ್ ॥ ಯೋ ದದಾತಿ ಮಹರ್ಲೋಕೇ ಚಿರಂ ವಸತಿ ಧ್ರುವಂ ॥ ಉತ್ಪಾದಯತಿ ಯಃ ಕ್ಷೇತ್ರೇ ವೈಷ್ಣವೇ ಫಲಿನಸ್ತರೂನ್ । ನಾಳಿಕೇರಾದಿಕಾನ್ ಯಾತಿ ಸಸ್ವರ್ಗಂ ಪ್ರೇತ್ಯ ದು

---

ಶ್ರೀಭಗವದಾಲಯದಲ್ಲಿ ಶುದ್ಧೋದಕ ಪ್ರೋಕ್ಷಣವನ್ನು ಯಾವನಾದರೆ ಮಾಡುತ್ತಾನೆಯೊ ಅಂತವನು ವರುಣಲೋಕವನ್ನು ಹೊಂದಿ ಅಲ್ಲಿ ಅನೇಕ ವರ್ಷಗಳು ಸುಖವನ್ನೈದುವನು. ॥ ೪೨ ॥

ಭಗವದಾಲಯವನ್ನು ಗುಡಿಸಿ ಸಾರಿಸಿ ಪುಷ್ಪಗಳನ್ನು ತಂದುಹಾಕುವಾತನು, ತನಗೆ ಅಪೇಕ್ಷಿತಗಳಾದ ಸರ್ವ ಇಷ್ಟಾರ್ಥಗಳನ್ನು ಹೊಂದುವನು.

ಸುಸಸ್ಯವಾದ ಫಲವನ್ನು ಕೊಡುವಂಥಾ ಉತ್ತಮವಾದ ಭೂಮಿಯನ್ನು ದೇವರಿಗೆ ಸಮರ್ಪಿಸುವಂತವನು ತನಗೆ ಅಪೇಕ್ಷಿತಗಳಾದ ಸರ್ವಲೋಕಗಳನ್ನು ಹೊಂದುವನು. ॥ ೪೪ ॥

ಪುಷ್ಪಭರಿತವಾದ ಉದ್ಯಾನವನವನ್ನು ಸಮರ್ಪಿಸುವಂತವನು ತಪೋಲೋಕದಲ್ಲಿ ಸುಖೋತ್ತರನಾಗಿರುವನು. ಫಲವೃಕ್ಷಗಳಿಂದಲೂ ಸರೋವರಗಳಿಂದಲೂ ತುಂಬಿದ ನೀರಿಗೆ ಆಶ್ರಯವುಳ್ಳ ಅಡಿಕೆಯ ತೋಟವನ್ನು ಭಗವದಾರಾಧನಕ್ಕಾಗಿ ಕೊಡುವಂತವನು ಮಹರ್ಲೋಕದಲ್ಲಿ ಚಿರಕಾಲವು ಸುಖಿಸುವನು. ॥ ೪೫ ॥

ವಿಷ್ಣುಕ್ಷೇತ್ರಗಳಲ್ಲಿ ಯಾವನಾದರೆ ಫಲವತ್ತಾದ ತೆಂಗಿನಮರವೇ ಮೊದಲಾದವುಗಳನ್ನು ಇಟ್ಟು ಕಾಪಾಡಿ ಭಗವದಾರಾಧನಕ್ಕೆ ಸಮರ್ಪಿಸುವನೋ ಅವನು ದುರ್ಲಭವಾದ ಸ್ವರ್ಗವನ್ನೇ ಹೊಂದುವನು. ॥ ೪೬ ॥

ರ್ಲಭಂ ॥ ಆರಾಧನಾಯ ತುಲಸೀ ಮುತ್ಪಾದಯಂತಿ ಯ
ತ್ನವಾನ್ । ಸುರಭೀಣಿಚ ಪುಷ್ಪಾಣಿ ದಿವಿದೇವೈ ಸ್ಸಪೂ
ಜ್ಯತೇ ॥೪೭॥ ವಾಪೀಕೂಪ ತಟಾಕಾನಿ ವಿಷ್ಣೋರ್ಮಂದಿ
ರ ಭೂಮಿಷು । ಉತ್ಪಾದಯಂತಿ ಹಸ್ತಸ್ಥಾ ಸ್ತಸ್ಯಸರ್ವ
ಸಮೃದ್ಧಯಃ ॥ ನತಂ ಬಧ್ನಂತಿ ಪಾಪಾನಿ ಬಹು ಜನ್ಮಾ
ರ್ಜಿತಾ ನ್ಯಪಿ ॥ ಯಃ ಕುರ್ಯಾ ದ್ವೈಷ್ಣವಂ ಧಾಮ ಭಕ್ತಿ
ಶ್ರದ್ಧಾಭಯೋಚಿತಂ । ಖಣ್ಡಿತೇ ಸ್ಫುಟಿತೆ ಧಾಮ್ನಿ ದೂ
ಷಿತೇಚ ಸುಧಾದಿಭಿಃ । ಸಮಾದಧ್ಯಾ ತ್ಪುದರ್ಥಾನಮ
ಸಲೋಕಂ ಯಾತಿ ವೈಷ್ಣವಂ ॥೫೦॥ ಸ್ನಾನ ಪಾನಾ
ಮ್ಭಸಾಂ ವಿಷ್ಣೋಃ ಪ್ರದಾನಾ ತ್ತತ್ಸಲೋಕಭಾಕ್ ।
ಸ್ನಾನೀಯ ದ್ರವ್ಯದಾನೇನ ನೀರೋಗಃ ಪ್ರೇತ್ಯಮೋ
ದತೇ । ಕ್ಷೌಮಾದಿ ದಾನಾದಾಪ್ನೋತಿ ಪರಲೋಕೇ ಮ
ಹತ್ಸುಖಂ ॥೫೧॥ ಆಲೇಪನ ದ್ರವ್ಯದಾನಾ ತ್ಕಾಮಾನಾ
ಪ್ನೋತಿ ಶಾಶ್ವತಾನ್ । ಏಲಾ (ಲವಙ್ಗ) ಕರ್ಪೂರ ತಾ

---

ಭಗವದಾರಾಧನಾರ್ಥವಾಗಿ ತುಲಸೀ ಪುಷ್ಪಗಳನ್ನು ಹಾಕಿ ಯತ್ನ
ದಿಂದ ಕಾಪಾಡುವಂತವನು ಸ್ವರ್ಗದಲ್ಲಿ ದೇವತೆಗಳಿಂದ ಪೂಜಿಸಲ್ಪಡುವನು,

ಭಗವನ್ಮಂದಿರ ಪ್ರದೇಶಗಳಲ್ಲಿ ವಾಪೀಕೂಪ ತಟಾಕಾದಿಗಳನ್ನು
ನಿರ್ಮಾಣಮಾಡುವಂತವನಿಗೆ ದುರ್ಲಭಗಳಾದ ಸರ್ವಶ್ರೇಯಸ್ಸುಗಳು ಕೈಗೂ
ಡುವುವು. ಅಂತವನಿಗೆ ಅನೇಕ ಜನ್ಮಗಳಿಂದ ಸಂಪಾದಿಸಲ್ಪಟ್ಟ ಪಾಪಕರ್ಮ
ಗಳಿದ್ದರೂ ಅವು ಅವನಿಗೆ ಬಂಧಕಗಳಾಗಲಾರವು. ॥ ೪೯ ॥

ಯಾವನಾದರೆ ದೇವಸ್ಥಾನವು ಶಿಥಿಲವಾಗಿದ್ದರೂ ಒಡೆದುಹೋಗಿ
ದ್ದರೂ ಮಲಿನವಾಗಿದ್ದರೂ ಅದನ್ನು ಗಾರೆ ಮೊದಲಾದವುಗಳಿಂದ ಭಕ್ತಿಶ್ರ
ದ್ಧಾದಿಗಳೊಡನೆ ಕ್ರಮಪಡಿಸುವನೊ ಅಂತವನು ವಿಷ್ಣುಲೋಕವನ್ನು
ಹೊಂದುವನು. ॥ ೫೦ ॥

ಶ್ರೀವಾಸುದೇವನಿಗೆ ಸ್ನಾನಪಾನಾರ್ಥವಾದ ದಿವ್ಯತೀರ್ಥವನ್ನು ಸಮ
ರ್ಪಿಸುವಂತವನು ಭಗವತ್ಸಾಲೋಕ್ಯವನ್ನು ಹೊಂದುವನು. ಅಭಿಷೇಕ
ಕ್ಕಾಗಿ ತೀರ್ಥವನ್ನು ತರುವಂತವನು ಇಹದಲ್ಲಿ ಆರೋಗನಾಗಿ ಪರಲೋಕ
ದಲ್ಲಿಯೂ ಸುಖಿಸುವನು. ಪಟ್ಟುಪೀತಾಂಬರಾದಿಗಳನ್ನು ಸಮರ್ಪಿಸುವಂತ
ವನು ಪರಲೋಕದಲ್ಲಿ ವಿಪುಲವಾದ ಸುಖವನ್ನು ಹೊಂದುವನು. ॥ ೫೧ ॥

ಮುಷ್ಟಿಲೀ ತೈಲಾದಿ ಸ್ಪರ್ಶನಾತ್ಸುಖೀ । ಪರತ್ರೇಹಚ
ಲೋಕೇ ಸ್ಯಾದ್ದೀರ್ಘಕಾಲ ಮಸಂಶಯಃ ॥೫೨॥ ಚಾ
ಮರವ್ಯಜನ ಚ್ಛತ್ರದಾನಾತ್ಸ್ಯಾ ರಾಜ್ಯಮಶ್ನುತೇ॥೫೩॥
ದಾನಾ ದಾಭರಣಾದೀನಾಂ ತೇಜಸ್ವೀ ದಿವಿ ಮೋದತೆ ।
ದಾನಾಚ ನವರತ್ನಾನಾಂ ದೇವಸಾಲೋಕ್ಯ ಮಶ್ನುತೆ॥
ಆದರ್ಶನಪ್ರದಾನೇನ ದೃಶ್ಯ ಸ್ಸರ್ವೈರ್ಭವಿಷ್ಯತಿ । ಧೂ
ಪದ್ರವ್ಯ ಪ್ರದಾನೇನ ಸ್ವಸ್ಥಾನಂ ಸ್ವರ್ಗಿಣಾಂ ಭವೇ
ತ್ ॥೫೫॥ ಉಪಾನಹೌ ಪಾದುಕೇಚ ವಾಹನಂ ಯಾನ
ಮೇವಚ । ದದಾತಿಯೋ ಮಣ್ಡಯಿತ್ವಾ ಮಣಿಕಾಞ್ಚನ
ಚಿತ್ರಿತಂ । ಸವಿಮಾನಂ ಸುದುಷ್ಪ್ರಾಪಂ ಪ್ರಾಪ್ನೋ
ತ್ಯೇವ ನ ಸಂಶಯಃ ॥೫೬॥ ಅಲಂಕೃತಂ ಭದ್ರಪೀಠಂ

---

ಗನ್ಧಾದಿ ದ್ರವ್ಯಗಳನ್ನು ಪರಮಾತ್ಮನಿಗೆ ಸಮರ್ಪಿಸುವಂತವನು ಶಾಶ್ವತಗಳಾದ ಇಷ್ಟಾರ್ಥಗಳನ್ನು ಹೊಂದುವನು. ಏಲಾಲವಂಗ ಕರ್ಪೂರ ತಾಂಬೂಲಾದಿಗಳನ್ನು ಸಮರ್ಪಿಸುವಂತವನು ಇಹಪರಗಳಲ್ಲಿ ದೀರ್ಘಕಾಲವೂ ಸುಖಿಸುವನು. ಈ ವಿಷಯದಲ್ಲಿ ಸಂಶಯವೇ ಇಲ್ಲವು. ॥ ೫೨ ॥

ಚಾಮರ ಬೀಸಣಿಗೆ ಛತ್ರಾದಿಗಳನ್ನು ಭಗವದಾರಾಧನಾರ್ಥವಾಗಿ ಸಮರ್ಪಣೆ ಮಾಡಿದ್ದೇ ಆದರೆ ಅಂತವರಿಗೆ ಸ್ವತಂತ್ರ ಪ್ರಭುತ್ವವು ಕೈಗೂಡುವದು. ॥ ೫೩ ॥ ಆಭರಣಗಳ ದಾನದಿಂದ ಮಹಾತೇಜಸ್ವಿಯಾಗಿ ಸ್ವರ್ಗದಲ್ಲಿ ಸಂತೋಷಿಸುವನು. ನವರತ್ನಗಳ ದಾನದಿಂದ ಭಗವತ್ಸಾಲೋಕ್ಯವನ್ನೇ ಹೊಂದುವನು. ॥೫೪॥ ಭಗವದಾರಾಧನಾರ್ಥವಾಗಿ ಕನ್ನಡಿಯನ್ನು ಸಮರ್ಪಿಸುವಂತವನು ಸರ್ವರಿಂದಲೂ ನೋಡಲರ್ಹನಾಗುವನು. (ಇವನು ಪರಮಪಾವನನಾದಕಾರಣ ಇವನನ್ನು ನೋಡುವದು ಸರ್ವರಿಗೂ ಪಾವನತ್ವ ಹೇತುವಾಗಿರುವುದೆಂದರ್ಥವು.) ಧೂಪ ದ್ರವ್ಯದಾನದಿಂದ ದೇವತೆಗಳ ಲೋಕವೇ ಇವನಿಗೂ ಸ್ವಸ್ಥಾನವಾಗುವುದು. ॥ ೫೫ ॥

ಪಾದರಕ್ಷೆಯನ್ನಾದರೂ ಪಾದುಕೆಯನ್ನಾದರೂ ಕುದುರೆ ಮೊದಲಾದ ವಾಹನವನ್ನಾದರೂ ಪಲ್ಲಕ್ಕಿ ಮೊದಲಾದ ಯಾನವನ್ನಾದರೂ ರತ್ನಾದಿಗಳಿಂದ ಅಲಂಕರಿಸಿ ಯಾವನಾದರೆ ವಾಸುದೇವನಿಗೆ ಸಮರ್ಪಿಸುವನೊ ಅಂತವನು ವಿಮಾನಾರೂಢನಾಗಿ ಹೊಂದಲಶಕ್ಯವಾದ ಲೋಕವನ್ನು ಹೊಂದುವನು. ॥ ೫೬ ॥

ದೇವರು ವಿಜಯಮಾಡಿರುವದಕ್ಕೆ ಅನುಕೂಲವಾದ ಭದ್ರಪೀಠವನ್ನು ಸಮರ್ಪಣೆಮಾಡುವಂತವನು ಸರ್ವೇಷ್ಟಾರ್ಥಗಳನ್ನು ಹೊಂದುವನು.॥೫೭॥

ಪ್ರಯಚ್ಛನ್ ಸರ್ವಕಾಮಭಾಕ್ ॥೫೭॥ ವಿನತಾನನ್ದನ
ಸ್ಥಾನಂ ದ್ವಜಮುತ್ಪಾದ್ಯದರ್ಶಯನ್ । ಸಾಮೀಪ್ಯಂ
ಸಹಸಾ ವಿಷ್ಣೋರ್ಯಾತಿ ಸದ್ಯಶ್ಚತುರ್ಮುಖ ॥೫೮॥ ಧ್ವ
ಜಂಚ ವಾದ್ಯೈ ಮುತ್ಪಾದ್ಯ ವಿಷ್ಣು ಸಾತ್ಕುರುತೇತು
ಯಃ । ಸದಿವ್ಯ ದುಂದುಭಿ ಪ್ರಾಯಂ ಸ್ಥಾನಂ ಪ್ರಾಪ್ಯ
ವಿರಾಜತೇ ॥೫೯॥ ದಾಸೀ ದಾಸಂ ತಥಾತ್ಮೀಯ ಮಾತ್ಮಾ
ನಂಚ ಪ್ರಯಚ್ಛತಿ । ವಾಸುದೇವಾಯ ದಾಸ್ಯೇನ ಮು
ಕ್ತಿಃ ಕರತಲೇ ಸ್ಥಿತಾ ॥೬೦॥ ನೃತ್ತಭೇದೈ ರ್ಗೀತಭೇದೈ
ಸ್ತಥಾವಾದ್ಯೈರನೇಕಧಾ । ಶ್ರೋತವ್ಯೈ ರಪಿ ದೃಶ್ಯೈ
ಶ್ಚ ಏವಂ ದೇವೇಶ ಸನ್ನಿಧೌ ॥೬೧॥ ಅಸೀನ ಮುಪಚಾ
ರೈಸ್ತೈ ರ್ಯೇ ಸಮಾರಾಧಯನ್ತಿ ತೇ । ಪ್ರೇತ್ಯ ದಿವ್ಯೇ
ಷು ಲೋಕೇಷು ಪೂಜ್ಯತೇ ತೈ ರ್ನ ಸಂಶಯಃ ॥೬೨॥

---

ಎಲೈ ಚತುರ್ಮುಖನೆ! ಗರುತ್ಮಂತನಿಗೆ ವಾಸಸ್ಥಾನವಾದ ಧ್ವಜವನ್ನುಮಾಡಿ ದೇವರಿಗೆ ತೋರಿಸುವಂತವನು ತತ್ಕ್ಷಣದಲ್ಲಿಯೆ ಭಗವತ್ಸಾಮೀಪ್ಯವೆಂಬ ಮೋಕ್ಷವನ್ನೇ ಹೊಂದುವನು. ॥ ೫೮ ॥

ಧ್ವಜವನ್ನುಮಾಡಿ ವಾದ್ಯಘೋಷ ಪುರಸ್ಸರವಾಗಿ ಪರಮಾತ್ಮನಿಗೆ ಅರ್ಪಣೆಮಾಡುವಂತವನು ದಿವ್ಯದುಂದುಭಿವಾದ್ಯಗಳಿಂದ ತುಂಬಿದ ದಿವ್ಯ ಲೋಕವನ್ನು ಹೊಂದಿ ಪ್ರಕಾಶಿಸುವನು. ॥ ೫೯ ॥

ಭಗವತ್ಸೇವಾರ್ಥವಾಗಿ ದಾಸೀದಾಸವರ್ಗವನ್ನೂ ಮತ್ತು ತನ್ನನ್ನೂ ತನಿಗೆಸೇರಿದ ಬಂಧುವರ್ಗವನ್ನೂ ಕೇವಲ ದಾಸ್ಯಭಾವದಿಂದ ಅರ್ಪಿಸುವಂತವನಿಗೆ ಮೋಕ್ಷವು ಹಸ್ತಗತವಾಗಿಯೇ ಇರುವುದು. ॥ ೬೦ ॥

ದೇವರು ಆಸ್ಥಾನದಲ್ಲಿ ಬಿಜಮಾಡಿಸಿರುವಾಗ ಕಣ್ಣಿನಿಂದ ನೋಡತಕ್ಕವುಗಳೂ ಕಿವಿಯಿಂದ ಕೇಳತಕ್ಕವುಗಳೂ ಆದ ನೃತ್ತಗೀತ ವಾದ್ಯಾದಿಗಳಿಂದಲೂ ಅನೇಕಪ್ರಕಾರವಾಗಿ ದೇವರನ್ನು ದಿವ್ಯೋಪಚಾರಗಳಿಂದಲೂ ಆರಾಧಿಸುವಂತವರು ಈ ಲೋಕವನ್ನು ಬಿಟ್ಟು ದಿವ್ಯಲೋಕಗಳಲ್ಲಿ ದೇವತೆಗಳಿಂದ ಪೂಜಿಸಲ್ಪಡುವುದರಲ್ಲಿ ಸಂಶಯವಿಲ್ಲವು. ॥ ೬೧ ॥

“ತಂ ದೈವತಾನಾಂ ಪರಮಂಚ ದೈವತಂ” ಎಂಬ ಪ್ರಮಾಣಾನುಸಾರವಾಗಿ ದೇವತೆಗಳಿಗೆಲ್ಲಾ ಅಧಿದೇವತೆಯಾದ ಪರಮಾತ್ಮನನ್ನು ಪ್ರದಕ್ಷಿಣ ನಮಸ್ಕಾರ ಸ್ತುತಿರೂಪಗಳಾದ ವುಪಚಾರಗಳಿಂದ ಆರಾಧಿಸುವಂತವರು ಪರಮಪದದಲ್ಲಿ ನಿತ್ಯಮುಕ್ತರುಗಳಿಂದ ಪರಮಾತ್ಮನು ಆರಾಧಿಸಲ್ಪಡುವಂತೆ ದೇವಶಬ್ದವಾಚ್ಯರಾದ ನಿತ್ಯಮುಕ್ತರುಗಳಿಂದ ಪೂಜಿಸಲ್ಪಡುವರು.

ರಂ।

ಕರ್ಮ ಶೈಷ್ಯೈಃ ಪುನರ್ಜನ್ಮ ಕರ್ಮಾನುಗುಣ ಯೋನಿಷು ।
ಉತ್ಕೃಷ್ಟಾಸ್ವೇವ ಭೋಕ್ತಾರೋ ಲಭನ್ತೇ ಸುಖಿನ
ಸ್ಸದಾ ॥ ॥೭೪॥

ದೇವಸ್ವಾಪಹಾರಾದೀನಾಂ ಪ್ರತ್ಯವಾಯಃ.

ಪ್ರಾಸಾದ ಮಣ್ಡಪಾದೀನಾಂ ಭೋಕ್ತಾರಃ ಕೈಟಭ
ದ್ವಿಷಃ ॥ ಯೇ ಮೂಢಮತಯಃ ಪ್ರೇತ್ಯ ನಿರಯೇಷು
ನಿರತ್ಯಯಾಃ । ವಸನ್ತಿ ಭೂಯೋನೀಚಾಸು ಜಾಯ
ನ್ತೇ ಯೋನಿಷು ಧ್ರುವಂ ॥೭೫॥ ಭೂಷಣಚ್ಛತ್ರ ವಸ್ತ್ರಾ
ದಿ ಯೋಹರಾತ್ ದುರ್ಮತಿರ್ನರಃ । ಗಳೇನಿಗಳಿತಃಪಾಶೈಃ
ಕೃಷ್ಯತೆ ನಿರಯೇಷುಸಃ ॥೭೬॥ ವಾಹನಾನಿಚ ಯಾ
ನಾನಿ ವೈಷ್ಣವಾನಿ ಹರನ್ತಿಯೆ । ಮೋಹಾದ್ವಸನ್ತಿ

---

ಳನ್ನು ಸಮರ್ಪಣೆಮಾಡುವಂತವರು ಅಪೇಕ್ಷಿತಗಳಾದ ಉತ್ತಮಲೋಕಗ
ಳನ್ನು ಹೊಂದುವರು. ॥ ೭೩ ॥

ಈರೀತಿಯಾಗಿ ಮೇಲೆ ವಿವರಿಸಿರುವ ಭಗವತ್ಸೇವಾನಿರತರು ಆಯಾ
ಸೇವೆಗಳಿಗೆ ತಕ್ಕ ಪಾರಲೌಕಿಕ ದಿವ್ಯಭೋಗಗಳನ್ನನುಭವಿಸಿ ಕರ್ಮಶೇಷ
ದಿಂದ ಭೂಮಿಯಲ್ಲಿ ಪುನಶ್ಚ ಹುಟ್ಟುವಾಗ ಪೂರ್ವಜನ್ಮದಲ್ಲಿ ಮಾಡಲ್ಪಟ್ಟ
ಸತ್ಕರ್ಮಗಳಿಗೆ ಅನುರೂಪಗಳಾದ ಶ್ರೇಷ್ಠಜನ್ಮಗಳನ್ನೆತ್ತಿ ಭಗವದ್ಭಕ್ತಿಭ
ರಿತರಾಗಿ ಸುಖಪಡುವರು.

ಭಗವದ್ದ್ರವ್ಯಾಪಹಾರಿಗಳಿಗುಂಟಾಗುವ ಬಾಧಕಗಳು.

ಈರೀತಿಯಾಗಿ ಭಗವತ್ಸೇವಾನಿರತರಾದ ಮಹನೀಯರಿಗುಂಟಾಗುವ
ಭಾಗ್ಯಪರಂಪರೆಗಳನ್ನು ಹೇಳಿ ದೇವ ದ್ರವ್ಯಾಪಹಾರಿಗಳಾದ ನೀಚಜನಗ
ಳಿಗುಂಟಾಗುವ ಬಾಧಕಗಳನ್ನು ಇನ್ನುಮುಂದೆ ನಿರೂಪಿಸುತ್ತಾರೆ.

ಕೈಟಭಾರಿಯಾದ ದೇವರ ಪ್ರಾಸಾದ (ಉಪ್ಪರಿಗೆ) ಮಂಡಪಾದಿಗ
ಳನ್ನು ತಮ್ಮಗಳ ಭೋಗಾರ್ಥವಾಗಿ ಉಪಯೋಗಿಸಿಕೊಳ್ಳುವಂತಹ ಮೂ
ಢಜನರು ಸ್ಥಿರವಾಗಿ ನರಕಗಳನ್ನನುಭವಿಸಿ ಪುನಶ್ಚ ನೀಚಯೋನಿಗಳಲ್ಲಿ
ಹುಟ್ಟುವರು. ॥ ೭೫ ॥

ದೇವರ ಆಭರಣಗಳನ್ನಾಗಲಿ ಛತ್ರ ವಸ್ತ್ರಾದಿಗಳನ್ನಾಗಲಿ ದುರ್ಬು
ದ್ಧಿಯುಳ್ಳ ಯಾವನಾದರೆ ಅಪಹರಿಸುವನೊ ಅಂತವನ ಕೊರಳಿಕ್ಕೆ ಯಮ
ದೂತರು ಅಯಸ್ಸೂತ್ರಗಳನ್ನು ಹಾಕಿ ಎಳೆದು ನರಕಗಳಲ್ಲಿ ಹಾಕುವರು.

ಕೇದೀರ್ಥೈ ಪುಂಗಾರನರಕೋದಕೆ । ಪ್ರೇತ್ಯಭೂಯೋಪಿ ಜಾಯನ್ತೇ ಗರ್ದ್ಧಭೋಷ್ಟ್ರಾದಿ ಯೋನಿಷು ॥ ಚನ್ದನಾದೀನಿ ವಸ್ತ್ರಾನಿ ಪುಷ್ಪಾಣಿ ಸುರಭೀಣ್ಯಪಿ । ಹರನ್ತಿ ಸ್ವಾನಿ ವಿಷ್ಣೋಸ್ತೇ ವ್ರಜನ್ತೇ ಯಾತನಾಂ । ಅನುಭೂಯ ಪುನರ್ಬ್ರಹ್ಮನ್ ಜಾಯನ್ತೇ ಗಂಧಮೂಷಿಕಾಃ ।೭೮॥ ಉಪಾನತ್ಪಾದುಕಾಪೀಠ ವ್ಯಜನಾನಿ ಹರನ್ತಿಯೇ । ಉಷಿತ್ವಾ ನಿರಯೇಷ್ವೇತೇ ಜಾಯನ್ತೇ ಫಣಿನಾಂ ಕುಲೇ ॥೭೯॥ ಗೋ ಭೂಹಿರಣ್ಯ ವಸ್ತ್ರಾದಿಂ ಧನಂ ವಿಷ್ಣೋಃ ಪರಿಗ್ರಹಂ । ಅಪಹೃತ್ಯಯೇನು ಭುಜ್ಯನ್ತೇ ನರಕೇಷು ನಿರತ್ಯಯಾಃ । ಉಷಿತ್ವಾಪ್ರೇತ್ಯ ಭೂಯೋಪಿ ಜಾಯನ್ತ ಶ್ವಾದಿ ಯೋನಿಷು ॥೮೦॥ ಸರ್ವೇಷು ನರಕೇಷ್ವೇವಂ ದೇವ ಬ್ರಹ್ಮಸ್ವ ಹಾರಿಣಃ । ವಸನ್ತಿ ಮೂಢಮತಯೋ ಯಾತ್ವಾ ದುಃಖಾನಿ ಭೂಯಃ

---

ಪರಮಪುರುಷನಾದ ಶ್ರೀಮಹಾವಿಷ್ಣುವಿನ ವಾಹನಗಳನ್ನಾದರೂ ಪಲ್ಲಕ್ಕಿಗಳು ಮೊದಲಾದ ಯಾನಗಳನ್ನಾದರೂ ಯಾರಾದರೆ ಅಪಹರಿಸುವರೋ ಅಂತವರು ಬೆಂಕಿಯ ಕೆಂಡಗಳಲ್ಲಿ ಮುಳುಗುವುದೆಂಬ ನರಕದಲ್ಲಿ ವಾಸಮಾಡುವರು. ಈರೀತಿಯಾಗಿ ನರಕವನ್ನು ಅನುಭವಿಸಿ ಕತ್ತೆ ಒಂಟೆ ಮೊದಲಾದ ನೀಚಯೋನಿಗಳಲ್ಲಿ ಹುಟ್ಟುವರು. ॥ ೭೭ ॥

ಗನ್ಧ ಪುಷ್ಪಾದಿ ಪರಿಮಳದ್ರವ್ಯಗಳನ್ನಪಹರಿಸುವಂತವರು ನಾನಾವಿಧಗಳಾದ ಯಮಯಾತನೆಗಳನ್ನನುಭವಿಸಿ ಚುಣ್ಚಿಲಿಗಳಾಗಿ ಹುಟ್ಟುವರು. ದೇವಸ್ಥಾನಕ್ಕೆ ಸೇರಿದ ಪಾದರಕ್ಷಾ ಪಾದುಕಾ ಪೀಠ ಬೀಸಣಿಗೆ ಮೊದಲಾದವುಗಳನ್ನಪಹರಿಸುವಂತವರು ಬಹುಕಾಲದವರಿಗೂ ನರಕಯಾತನೆಗಳನ್ನನುಭವಿಸಿ ವಿಷೋಗ್ರವಾದ ಸರ್ಪಜನ್ಮಗಳನ್ನೈತ್ತುವರು. ॥೭೯॥

ಭಗವತ್ಪರಿಗ್ರಹೀತಗಳಾದ ಗೋ ಭೂ ಹಿರಣ್ಯ ವಸ್ತ್ರಾದಿಗಳನ್ನು ಬಲಾತ್ಕಾರದಿಂದ ಅಪಹರಿಸಿ ಯಾರಾದರೆ ಅನುಭವಿಸುವರೊ ಅಂತವರು ಸ್ವಲ್ಪವೂ ವಿರಾಮವಿಲ್ಲದೆ ನರಕಗಳನ್ನನುಭವಿಸಿ ಅಲ್ಲಿಂದ ಪುನಃ ಶ್ವಾನಾದಿ ಮೊದಲಾದ ನೀಚಯೋನಿಗಳಲ್ಲಿ ಹುಟ್ಟುವರು. ॥ ೮೦ ॥

ಈರೀತಿಯಾಗಿ ದೇವಬ್ರಾಹ್ಮಣರ ಸ್ವತ್ತುಗಳನ್ನು ಅಪಹರಿಸುವಂತವರು ಸಮಸ್ತ ನರಕಗಳಲ್ಲಿಯೂ ಯಮಯಾತನೆಗಳನ್ನು ಬಹುವಾಗಿ ಅನುಭವಿಸಿಕೊಂಡು ವಾಸಮಾಡುವರು. ॥ ೮೧ ॥

ಸೂ ॥ ೪೧ ॥ ವ್ಯಾಯಾಮೋದ್ವರ್ತನಾಭ್ಯಜ್ಞ ಸ್ನಾನೇ
ಪಾನಾಶನಾದಿಕಂ । ಕುರ್ವನ್ತಿ ಮನ್ದಿರೇ ವಿಷ್ಣೋರ್ಯೇ
ತೇ ನಿರಯಗಾಮಿನಃ । ಪಚ್ಯನ್ತೇ ತತ್ರ ಭೂಯೋಽಪಿ
ಜಾಯನ್ತೇ ನೀಚಯೋನಿಷು ॥೪೨॥ ವಾಸುದೇವ ಪ್ರತಿ
ಕೃತೇರ್ಚ್ಛೇದನಚ್ಛೇದನಾದಿಷು । ವಿಕ್ರೀತಾದೀನಿಚಾನ್ಯೇ
ಷು ಯತನ್ತೇ ಪಾಪಚೇತಸಃ । ವಿಶೇಯಾನ್ತಿ ಕ್ರಮಾ
ತ್ಸರ್ವಾನ್ ನರಕಾನ್ ಭೃಶದಾರುಣಾನ್ ॥೪೩॥ ಅನ್ಯೇ
ಷ್ವಪ್ಯಪಚಾರೇಷು ಸ್ಥೂಲಸೂಕ್ಷ್ಮೇಷು ಮಾನವಾಃ ।
ಕೃತಿನಃಪ್ರೇತ್ಯ ನರಕೇ ಪಚ್ಯನ್ತೇ ದುಃಖಭಾಗಿನಃ ॥
ಇತಿ ಶ್ರೀಪಾಞ್ಚರಾತ್ರ ಮಹೋಪನಿಷದಿ ಪಾದ್ಮತನ್ತ್ರೇಚರ್ಯಾ
ಪಾದೇ ಸಮ್ಮಾರ್ಜನಾದಿ ಫಲ ದೇವಸ್ವಾಪಹಾರ
ದೋಷಕೀರ್ತನಂ ನಾಮ ಷೋಡಶೋಧ್ಯಾಯಃ
ಶ್ರೀಲಕ್ಷ್ಮೀ ಹಯವದನ ಪರಬ್ರಹ್ಮಣೇನಮಃ.

---

ದೇವಸ್ಥಾನಗಳಲ್ಲಿ ವ್ಯಾಯಾಮ (ಅಂಗಸಾಧನ) ಮೈತೊಳೆಯು ವದು ಅಭ್ಯಂಗಸ್ನಾನ ನೀರು ಕುಡಿಯುವದು ಭಗವತ್ಪ್ರಸಾದವಲ್ಲದೆ ತನ್ನ ಕುಕ್ಷಿಭರಣಾರ್ಥವಾದ ಅನ್ನ ಭಕ್ಷಣವೆ ಮೊದಲಾದ ನಿಂದ್ಯಕೃತ್ಯಗಳನ್ನು ಮಾಡುವಂತವರು ನರಕಗಳಲ್ಲಿ ಬಿದ್ದು ಯಾತನೆಗಳನ್ನನುಭವಿಸಿದ ಬಳಿಕ ಕರ್ಮಶೇಷದಿಂದ ನೀಚಜಾತಿಗಳಲ್ಲಿ ಹುಟ್ಟುವರು. ॥ ೪೨ ॥

ಶ್ರೀವಾಸುದೇವನ ದಿವ್ಯಮಂಗಳ ವಿಗ್ರಹದಲ್ಲಿ ವೈರೂಪ್ಯವನ್ನಾದರೂ ಅಂಗವೈಕಲ್ಯವನ್ನಾದರೂ ಅನ್ಯರಿಗೆ ವಿಕ್ರಯವನ್ನಾದರೂ ಮಾಡಲು ಯಾವ ಪಾಪಿಷ್ಠರಾದರೆ ಯತ್ನಿಸುವರೊ ಅಂತವರು ಕ್ರಮಕ್ರಮವಾಗಿ ಯಮಲೋಕವಲ್ಲಿರುವ ದಾರುಣಗಳಾದ ಸಮಸ್ತ ನರಕಗಳಲ್ಲಿಯೂ ಯಾತನೆಗಳನ್ನನುಭವಿಸುವರು. ॥ ೪೩ ॥

ಈರೀತಿಯಾಗಿ ಹಿಂದೆ ವಿವರಿಸಿರುವ ಅಪರಾಧಗಳನ್ನು ಮಾಡುವಂತವರು ಗುರುವಾಗಿಯೂ ಲಘುವಾಗಿಯೂ ಅವರವರು ಮಾಡಿದ ಅಪರಾಧಾನುಸಾರವಾಗಿ ಈ ಲೋಕದಿಂದ ಮರಣವನ್ನು ಹೊಂದಿದಬಳಿಕ ಮಹಾದುಃಖಾಕ್ರಾಂತರಾಗಿ ನರಕಗಳಲ್ಲಿ ಯಾತನೆಗಳನ್ನನುಭವಿಸುವರು. ॥೪೪॥

ಈಪ್ರಕಾರ ಶ್ರೀಮತ್ಪಾಂಚರಾತ್ರವೆಂಬ ಮಹೋಪನಿಷತ್ತಿನಲ್ಲಿ ಪಾದ್ಮ
ಸಂಹಿತಾ ಚರ್ಯಾಪಾದದಲ್ಲಿ ಸಮ್ಮಾರ್ಜನಾದಿಫಲ ದೇವಸ್ವಾಪಹಾರ
ದೋಷಕೀರ್ತನವೆಂಬ ೧೬ನೇ ಅಧ್ಯಾಯವು.
ಶ್ರೀ ಲಕ್ಷ್ಮೀ ಹಯವದನ ಪರಬ್ರಹ್ಮಣೇನಮಃ.